ವೈರಾಗ್ಯನಿಧಿ ಶಿವಾನುಭವ ಚಿರಚಕ್ರವರ್ತಿ

# ನಾರದಗಡ್ಡೆ ಚೆನ್ನಬಸವ ಸ್ವಾಮಿಗಳು

- ಶಾಂತರಸ





ವೈರಾಗ್ಯನಿಧಿ ಶಿವಾನುಭವ ಚರಚಕ್ರವರ್ತಿ

ನಾರದಗಡ್ಡೆ

# ಚೆನ್ನಬಸವ ಸ್ವಾಮಿಗಳು

ಶಾಂತರಸ



ಐ ಬಿ ಎಚ್ ಪ್ರಕಾಶನ
ಗಾಂಧಿನಗರ ಬೆಂಗಳೂರು 560 009

VAIRAAGYANIDHI SIVAANUBHAVA CHARACHAKRAVARTI NARADAGADDE CHENNABASAVA SWAMIGALU —a life sketch written in Kannada by Shantarasa. Published by P. N. Kamat, IBH Prakashana, Fifth Main, Gandhinagar, Bangalore 560 009



*

ಬೆಲೆ Rs 4 / 00

*

ಮುಖಪುಟ ಮತ್ತು ಚಿತ್ರಗಳು : ಮನೋಹರ್
ಛಾಯಾಚಿತ್ರಗಳು : ಲೇಖಕರ ಕೃಪೆಯಿಂದ

*

ಮೊದಲನೆಯ ಮುದ್ರಣ : 1979. ಪ್ರಕಾಶಕರು : ಪಿ. ಎನ್. ಕಾಮತ್, ಐಬಿಎಚ್ ಪ್ರಕಾಶನ, ಐದನೆಯ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು 560 009. ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ, ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್, ಬೆಂಗಳೂರು 560 054

*

Paper used for printing this book was made available by the Government of India at concessional rate.

## ಜನನ – ಬಾಲ್ಯ – ವಿದ್ಯಾಭ್ಯಾಸ

ಕನ್ನಡನಾಡಿನಲ್ಲಿ ಮಹಾಪುರುಷರಿಗೇನು ಕೊರತೆಯಿಲ್ಲ; ಕಾಲಕಾಲಕ್ಕೆ ಹುಟ್ಟಿ ಜನರನ್ನು ಉದ್ಧರಿಸುತ್ತ ಬಂದಿದ್ದಾರೆ. ಇವರಲ್ಲಿ ಹಲವರು ಲೋಕಪ್ರಸಿದ್ಧರು; ಕೆಲವರು ನಾಡಿಗೆ ಪ್ರಸಿದ್ಧರು; ಇನ್ನು ಕೆಲವರು ಪಟ್ಟಣಕ್ಕಷ್ಟೆ ಗೊತ್ತಿದ್ದವರು; ಮತ್ತೆ ಕೆಲವರು ಕೆಲವು ಹಳ್ಳಿಗಳಿಗೆ ಪರಿಚಿತರು. ಏನಿದ್ದರೂ ಇವರೆಲ್ಲರೂ ಒಂದೊಂದು ರೀತಿಯಲ್ಲಿ ಜನರ ಬದುಕನ್ನು ಹಸನುಗೊಳಿಸಿದವರು; ಜನರಿಗಾಗಿಯೇ ತಮ್ಮ ಜೀವನವನ್ನು ಗಂಧದಂತೆ ಸವೆಸಿದವರು, ದೀಪದಂತೆ ಉರಿಸಿದವರು, ಕಬ್ಬಿನಂತೆ ಹಿಂಡಿ ಹಿಪ್ಪೆಯಾದವರು, ಹೂವಿನಂತೆ ಅರಳಿ ಕಂಪನ್ನು ಎಂಟೂ ದಿಕ್ಕಿಗೆ ಹರಡಿದವರು. ಮಾನವ ಜಗತ್ತನ್ನು ಮಹತ್ತನ್ನಾಗಿ ಮಾಡಲು ಹೋರಾಡಿದವರು.

ಅಂಥಹ ಲೋಕಪ್ರಸಿದ್ಧ ಮಹಾತ್ಮರಲ್ಲಿ ಕನ್ನಡನಾಡಿನ ನಾರದಗಡ್ಡೆಯ ಚೆನ್ನಬಸವಸ್ವಾಮಿಗಳೂ ಒಬ್ಬರು. ಅವರ ಜೀವನ ಸರ್ವರಿಗೂ ಸರ್ವಕಾಲಕ್ಕೂ ಆದರ್ಶ. ಅವರ ಪ್ರತಿ ಉಸಿರೂ ಲೋಕ ಕಲ್ಯಾಣಕ್ಕಾಗಿ ಮೀಸಲಾಗಿತ್ತು. ಅವರ ಪ್ರತಿ ಹೆಜ್ಜೆ ಈ ನೆಲದ ಅನಿಷ್ಟವನ್ನು ಅಳಿಸಿತು; ಅವರ ಪ್ರತಿ ಮಾತೂ ಜನರ ಹೃದಯಗಳಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸಲು ಶ್ರಮಿಸಿತು.

ಚೆನ್ನಬಸವಸ್ವಾಮಿಗಳು ಹುಟ್ಟಿ ಬೆಳೆದುದು ಈಗಿನ ಬೀದರ್ ಜಿಲ್ಲೆಯ ಧರೆಸೀಮೆ ಎಂಬ ಪ್ರದೇಶದಲ್ಲಿ. ಲಿಂಗದಳ್ಳಿ ಅವರ ಊರು. ಗುರುಸಿದ್ಧಯ್ಯ - ನೀಲಮ್ಮ ತಂದೆ ತಾಯಿಗಳು. ಕಾಲ 16ನೇ ಶತಮಾನದ ಪೂರ್ವಾರ್ಧ.

ಗುರುಸಿದ್ಧಯ್ಯ-ನೀಲಮ್ಮ ಸಾತ್ವಿಕ ದಂಪತಿಗಳು. ಶಿವನಲ್ಲಿ ಅನನ್ಯ ಭಕ್ತಿಯುಳ್ಳವರು. ಲಿಂಗದಲ್ಲಿ ನಿಷ್ಠೆಯುಳ್ಳವರು. ಜಂಗಮದಲ್ಲಿ ಪ್ರೇಮವುಳ್ಳವರು. ಅವರು ಕೆಟ್ಟುದನ್ನು ಅರಿಯರು. ಅಲ್ಲದ್ದನ್ನು ಆಡರು. ಅವರ ನಡೆ-ನುಡಿ ಒಂದು. ಅವರಿಗೆ ಹೆಚ್ಚಿನ ಆಸೆಯಿಲ್ಲ. ಒಂದೆರಡು ಕೂರಿಗಿ ಹೊಲವಿತ್ತು. ಒಕ್ಕಲುತನಮಾಡಿ ಜೀವಿಸುತ್ತಿದ್ದರು. ಹೊಲದಿಂದ ಬಂದುದರಲ್ಲಿ ತೃಪ್ತರು. ಹೊಲದಲ್ಲಿ ದುಡಿಯುವುದೂ ಲಿಂಗಪೂಜೆಮಾಡುವುದೂ ಎರಡೂ ಅವರಿಗೆ ಒಂದೇ. ಶಿವ ಕೊಟ್ಟುದರಲ್ಲಿ ಗುರು ಲಿಂಗ ಜಂಗಮ ಸೇವೆಮಾಡಿ ಸಂತೋಷದಿಂದ ಕಾಲ ಕಳೆಯುತ್ತಿದ್ದರು.

ಪತಿಪತ್ನಿಯರಿಗೆ ಜೀವನದಲ್ಲಿ ಮಕ್ಕಳಿಲ್ಲದ್ದೊಂದೇ ಕೊರತೆಯೆನಿಸಿತ್ತು. ವಯಸ್ಸಾದಂತೆ ಆ ದಂಪತಿಗಳು ಮಕ್ಕಳ ಆಸೆ ತೊರೆದು ಮತ್ತಷ್ಟು ದೈವಾಸಕ್ತರಾದರು. ಎಲ್ಲವೂ ಶಿವನ ಲೀಲೆ ಎನ್ನುವಂತೆ ಆಗಲೇ ನೀಲಮ್ಮನಿಗೆ ಗರ್ಭ ನಿಂತಿತು; ನವಮಾಸ ಕಳೆದು ಗಂಡುಮಗು ಜನಿಸಿತು.

ಪತಿಪತ್ನಿಯರಿಗೆ ಹರ್ಷವೋ ಹರ್ಷ; ಶಿವನೇ ತಮ್ಮ ಉದರದಲ್ಲಿ ಹುಟ್ಟಿಬಂದಿದ್ದಾನೆ ಎಂದು ಭಾವಿಸಿದರು. ಮನೆಯ ಗುರುಗಳಿಂದ ಮಗುವಿಗೆ ಲಿಂಗ ಕಟ್ಟಿಸಿದರು. ಊರಿನ ಮುತ್ತೈದೆಯರು ಬಂದು ಮಗುವನ್ನು ತೊಟ್ಟಿಲಲ್ಲಿ ಹಾಕಿ, ಚೆನ್ನಬಸವ ಎಂದು ನಾಮಕರಣಮಾಡಿದರು.

ಮಗು ಚೆನ್ನಬಸವ ಬೆಳೆದ. ಐದನೆಯ ವರ್ಷಕ್ಕೆ



ಮಠಕ್ಕೆ ಕಳಿಸಿದರು. ಚೆನ್ನಬಸವ ಬಡವ–ಶ್ರೀಮಂತ, ಆ ಜಾತಿ ಈ ಜಾತಿ ಎಂಬ ಭೇದಭಾವವಿಲ್ಲದೆ ಎಲ್ಲ ಮಕ್ಕಳೊಡನೆಯೂ ಬೆರೆಯುತ್ತಿದ್ದ; ಆದರೆ ಎಲ್ಲರಿಗಿಂತ ಭಿನ್ನನಾಗಿ ಕಾಣುತ್ತಿದ್ದ. ಆತನ ಓದು ಎಲ್ಲರಿಗಿಂತ ಬೇರೆಯೇ ಆಗಿತ್ತು. ವಯಸ್ಸಿಗೆ ಮೀರಿ ಆತ ಗ್ರಹಿಸುತ್ತಿದ್ದ. ಮಠದಲ್ಲಿ ಓದು ಬರಹ ಲೆಕ್ಕ ಕಲಿತರೆ, ಮನೆಯಲ್ಲಿ ವಚನಗಳ ಬಾಯಿಪಾಠ,

ಶರಣರ ಚರಿತ್ರೆಯ ಅಭ್ಯಾಸ. ಆಗಾಗ ಮನೆಯಲ್ಲಿ ನಡೆಯು ತ್ತಿದ್ದ ಶಿವಾನುಭವ ಗೋಷ್ಠಿಗಳು ಆತನ ಮೇಲೆ ಬಹಳ ಪ್ರಭಾವ ಬೀರಿದವು. ಮನೆಯಲ್ಲಿ ತಂದೆಯಿಂದ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದವರ ವಚನಗಳ ಅಭ್ಯಾಸ ನಡೆಯಿತು.

ಚೆನ್ನಬಸವನ ಮಾತು ಅರಳು ಹುರಿದಂತೆ, ಹೂವರಳಿ ದಂತೆ. ಅನುಭಾವದ ಹಾಡುಗಳನ್ನು ಇಂಪಾಗಿ ಹಾಡುತ್ತಿದ್ದ.

## "ಗುರುವನ್ನು ಹುಡುಕಿಕೊಂಡು...."

ಚೆನ್ನಬಸವನಿಗೆ ಹನ್ನೊಂದು ವರ್ಷ ತುಂಬಿದವು. ಈಗೀಗ ಆತ ಮಾತು ಕಡಿಮೆ ಮಾಡಿ ಸದಾ ಚಿಂತನೆಯಲ್ಲಿ ರುತ್ತಿದ್ದ. ಒಂದು ದಿನ ಚೆನ್ನಬಸವ ತಂದೆತಾಯಿಗಳಿಗೆ ಭಕ್ತಿಯಿಂದ ಹೇಳಿದ: "ಯಾವುದೋ ಕರೆ ನನ್ನನ್ನು ಕರೆಯುತ್ತಿದೆ. ಅದು ಏನೆಂದು ಸ್ಪಷ್ಟವಾಗಿ ಹೇಳ ಲಾರೆ. ಆದಕ್ಕೆ ಹೃದಯ ಕೊಟ್ಟು ನಾನೀಗ ಹೋಗಬೇಕಾ ಗಿದೆ, ಹೋಗಲೇಬೇಕು. ಬಹುಶಃ ನಾನು ನನ್ನನ್ನು ಶಿವನ ಕಾರ್ಯಕ್ಕೆ ಅರ್ಪಿಸಿಕೊಳ್ಳಬೇಕಾಗುವುದೇನೋ? ನನಗೀಗ ಒಬ್ಬ ಗುರು ಬೇಕು; ಅವನನ್ನು ಹುಡುಕಿಕೊಂಡು ನಾನೀಗ ಹೋಗಬೇಕು. ನನ್ನನ್ನು ತಡೆಯಬೇಡಿರಿ. ನನಗೆ ನೀವು ಜನ್ಮ ಕೊಟ್ಟವರು, ಪೂಜ್ಯರು. ಈ ಜನ್ಮ ಸಾರ್ಥಕವಾಗಬೇಕು. ನಿಮ್ಮ ಮುಡಿಗೆ ನಾನು ಹೂ ತರಬೇಕು. ನನಗೆ ಆಶೀರ್ವದಿ ಸಿರಿ" ಗದ್ಗದನಾಗಿ ಚೆನ್ನಬಸವ ತಂದೆತಾಯಿಯ ಅಡಿಗಳಿ ಗೆರಗಿದ. ತಂದೆಯ ಹೃದಯ ತುಂಬಿ ಬಂದಿತು, ತಾಯಿಯ ಕಂಗಳು ತುಂಬಿ ಬಂದವು. ಮಗನ ಮಾತಿಗೆ ಅವರು ಎದು

ರಾಡಲಿಲ್ಲ, ಅಡ್ಡಿ ಮಾಡಲಿಲ್ಲ. ಹರಸಿದರು. ಚೆನ್ನಬಸವ ಹೊರಡಲು ಸಿದ್ಧನಾದ.

"ಮಗನೆ ನಾನೇನು ಕೊಡಬಲ್ಲೆ ನಿನಗೆ ? ನಾನು ಬಡವ" ಎಂದ ಗುರುಸಿದ್ಧಯ್ಯ.

"ಅಪ್ಪಾ, ಈ ಜನ್ಮ ಕೊಟ್ಟದ್ದೀರಲ್ಲಾ. ಅದಕ್ಕಿಂತ ದೊಡ್ಡದು ಯಾವುದಿದೆ ?" ಚೆನ್ನಬಸವ ನುಡಿದ.

ಗುರುಸಿದ್ಧಯ್ಯ ಒಳಹೋಗಿ ತನ್ನ ಸರ್ವಸ್ವವಾದ ಬಸವಣ್ಣನವರ ವಚನಗಳ ತಾಳೆವೋಲೆಯ ಕಟ್ಟನ್ನು ತಂದ.

"ಮಗನೆ, ಇದು ನನ್ನ ಆಸ್ತಿ. ತೆಗೆದುಕೋ, ಇದು ನಿನಗೆ ಸರ್ವಶಕ್ತಿಯನ್ನು ಕೊಡುವುದು."

ಅದನ್ನು ತೆಗೆದುಕೊಂಡು ಚೆನ್ನಬಸವ ಬೆನ್ನಿಗೆ ಕಟ್ಟಿಕೊಂಡ. ತಾಯಿ ನೀಲಮ್ಮ ಹಳೆಯ ಒಂದು ಕೊಡೆಯನ್ನು ತಂದು,

"ಚೆನ್ನಬಸವಾ, ಇದನ್ನು ಒಯ್ಯಿ. ಮಳೆಗಾಳಿ ಬಿಸಿಲುಗಳಿಂದ ಇದು ನಿನ್ನನ್ನು ರಕ್ಷಿಸುವುದು" ಎಂದಳು.

ತಾಯಿಯ ಅಂತಃಕರಣವೇ ರೂಪತಾಳಿ ಆ ಕೊಡೆಯಾಗಿ ಬಂದಿದೆ ಎನಿಸಿ ಅದನ್ನು ತೆಗೆದುಕೊಂಡ. ತಂದೆ-ತಾಯಿಗಳಿಗೆ ವಂದಿಸಿ ಹೊರಟುಬಿಟ್ಟ.

ಹತ್ತೆಂಟು ದಿನಗಳಲ್ಲಿ ತಂದೆತಾಯಿಗಳು ಕೊಟ್ಟ ವಸ್ತುಗಳು ಮಹಾಘನವೆನಿಸಿದುವು. ಮನಸ್ಸುಬಂದಲ್ಲಿ ಕುಳಿತು ಬಸವಣ್ಣನವರ ವಚನಗಳನ್ನೋದುವನು. ಕೊಡೆಯನ್ನು ನೋಡಿದಂತೆಲ್ಲ ತಾಯ ರೂಪ ಕಣ್ಣೆದುರಿಗೆ ಕಟ್ಟುವುದು. ದಿನಗಳೆದಂತೆಲ್ಲ ಆ ಕೊಡೆ ತಾಯ ಪ್ರೀತಿಯನ್ನು ಉಕ್ಕಿಸುವ ಜೊತೆಗೆ ವೈರಾಗ್ಯದ ಭಾವವನ್ನೂ ಬಲಿಸತೊಡಗಿತು. ಶಿವನ ನೀಲಿಯ ಬಾನಕೊಡೆ ವಿಶಾಲವೆನಿಸಿತು; ದೊಡ್ಡದೆನಿ

ಸಿತು. ಅಷ್ಟು ನೆರಳು ನನಗೇಕೆ? ನನಗೆ ಈ ಚಿಕ್ಕ ಕೊಡೆಯ ನೆರಳೇ ಸಾಕು. ಆಸೆ ಇಲ್ಲದಂತಾಗಬೇಕು. ವೈರಾಗ್ಯಕ್ಕೆ ಆಸೆ ಸಲ್ಲದು. ಆದಷ್ಟು ನನ್ನ ಅವಶ್ಯಕತೆಗಳು ಕಡಿಮೆಯಾಗಬೇಕು. ಈ ಕಡಿಮೆಯಾಗಬೇಕೆಂಬ ಸಂಕೇತವೇ ಈ ಕೊಡೆ. ತಾಯಿ ಈ ಭಾವನೆಯಿಂದಲೇ ಇದನ್ನು ಕೊಟ್ಟಿರಬೇಕು. ಮಳೆ ಗಾಳಿ ಬಿಸಿಲುಗಳಿಂದ ಒಬ್ಬನನ್ನು ರಕ್ಷಿಸಲು ಈ ಕೊಡೆ ಸಾಕಲ್ಲ! ಆಸೆಗಳು ಕಡಿಮೆಯಾಗಿ ಇಲ್ಲವೆನಿಸಿದರೆ ಈ ಹೃದಯ, ಈ ಜೀವ ಶಿವನ ಆ ನೀಲಿಯ ಕೊಡೆಯಷ್ಟು ದೊಡ್ಡದಾಗು



ವುವು. ಇಂಥ ಭಾವನೆಗಳಲ್ಲಿ ತೇಲಿ ತಂದೆತಾಯಿಗಳನ್ನು ನೆನೆಯುತ್ತ, ಶಿವನನ್ನು ಧ್ಯಾನಿಸುತ್ತ ಚೆನ್ನಬಸವ ಕಲ್ಯಾಣಕ್ಕೆ ಬಂದ.

> "ಕಲ್ಯಾಣವೆಂಬುದಿನ್ನಾರಿಗೆ ಹೊಗಬಹುದು ? ಹೊಗಬಾರದು, ಅಸಾಧ್ಯವಯ್ಯಾ. ಆಸೆ ಆಮಿಷ ಅಳಿದಂಗಲ್ಲದೆ ಕಲ್ಯಾಣದತ್ತ ಲಡಿಯಿಡಬಾರದು. ಒಳಹೊಱಗು ಶುದ್ಧನಾದಂಗಲ್ಲದೆ ಕಲ್ಯಾಣವ ಹೊಗಬಾರದು."

ಎಂಬ ಅಕ್ಕಮಹಾದೇವಿಯ ವಚನ ನೆನಪಾಯಿತು. ಹೃದಯ ಆತ್ಮಗಳನ್ನು ತೆರೆದು ನೋಡಿಕೊಂಡ. 'ಬಸವಾ' ಎನ್ನುತ್ತ ಕಲ್ಯಾಣವನ್ನು ಹೊಕ್ಕ. ಹೃದಯ ಧನ್ಯತೆಯಿಂದ ತುಂಬಿತು. ಎಲ್ಲ ಶರಣರನ್ನು ಕಣ್ಣಾರೆ ಕಂಡ ಅನುಭವವಾಯಿತು. ಅಲ್ಲಿಂದ ನಡೆದು ಮೂರುನಾಲ್ಕು ತಿಂಗಳು ಸಂಚರಿಸಿ ಆದವಾನಿಗೆ ಬಂದ.

## ಗುರು ಮುಟ್ಟಿ ಗುರುವಾದರು

ಈಗ ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿರುವ ತಾಲ್ಲೂಕು ಸ್ಥಳವಾದ ಆದವಾನಿ ಹಿಂದೆ ಭಕ್ತಿಯ ಕೇಂದ್ರವಾಗಿತ್ತು, ಮುಕ್ತಿಯ ನೆಲೆಯಾಗಿತ್ತು.

ಆದವಾನಿಯನ್ನು ಯದುವೀರರು ಆಳುತ್ತಿದ್ದರು. ಅವರು ಧರ್ಮಭೀರುಗಳು, ನ್ಯಾಯನಿಷ್ಠುರರು, ಪ್ರಜಾರಂಜಕರು. ಅವರಿಗೆ ಶ್ರೀಗುರುಸಿದ್ಧ ಸ್ವಾಮಿಗಳು ಗುರುಗಳು. ಈ ಗುರುಸಿದ್ಧಸ್ವಾಮಿಗಳು ತೋಂಟದ ಸಿದ್ಧಲಿಂಗೇಶ್ವರನ ಶಿಷ್ಯ ಸಂತಾನದಲ್ಲಿ ಒಬ್ಬರು. ಯದುವೀರರ ಇಚ್ಛೆಯಂತೆ ಗುರುಸಿದ್ಧಸ್ವಾಮಿಗಳು ಆದವಾನಿಯಲ್ಲಿ ಯಾದವಗಿರಿ ಶೂನ್ಯಪೀಠವೆಂಬ ಮಠವನ್ನು ಸ್ಥಾಪಿಸಿದರು. ಗುರುಸಿದ್ಧಸ್ವಾಮಿಗಳು

ಶಿವಾನುಭವ ಮೂರ್ತಿಗಳು, ಷಟ್‌ಸ್ಥಲ ಜ್ಞಾನಿಗಳು. ಅವರಿಗೆ ನೂರಾರು ಜನ ಶಿಷ್ಯರಿದ್ದರು.

ಚೆನ್ನಬಸವ ಸ್ವಾಮಿಗಳು ಆದವಾನಿಯ ಈ ಯಾದವ ಗಿರಿ ಶೂನ್ಯ ಪೀಠಕ್ಕೆ ಬಂದರು. ಗುರುಸಿದ್ಧ ಸ್ವಾಮಿಗಳು ಇವ ರನ್ನು ಕಂಡು ಆನಂದಪಟ್ಟು ಮುಂದೆ ಕಾರಣಿಕರಾಗುವ ರೆಂದು ಬಗೆದು ತಮ್ಮ ಶಿಷ್ಯರಲ್ಲಿ ಅವರನ್ನು ಸೇರಿಸಿಕೊಂಡರು.

ಏನನ್ನು ಹುಡುಕುತ್ತಿದ್ದರೋ ಅದು ಚೆನ್ನಬಸವ ಸ್ವಾಮಿಗಳಿಗೆ ದೊರಕಿತು. ಗುರುಸಿದ್ಧಸ್ವಾಮಿಗಳಲ್ಲಿ ಅವರು ತಮ್ಮ ನಿಜರೂಪವನ್ನು, ತಮ್ಮ ಭವಿಷ್ಯತ್ತನ್ನು ಕಂಡರು. ಅವರು ಅವರಿಗೆ ಕಾಮಧೇನುವೆನಿಸಿದರು, ಪರುಷವೆನಿಸಿದರು; ನಡೆದಾಡುವ ಪರಬೊಮ್ಮನೆನಿಸಿದರು.

ಯಾದವಗಿರಿ ಶೂನ್ಯಪೀಠದಲ್ಲಿ ಚೆನ್ನಬಸವರಿಗೆ ಹತ್ತೆಂಟು ವರ್ಷ ಅಧ್ಯಾತ್ಮದ ಅನುಭಾವದ ಶಿಕ್ಷಣ ದೊರೆ ಯಿತು. ಲಿಂಗವಂತ ಧರ್ಮದ ಎತ್ತರ ಬಿತ್ತರಗಳನ್ನು ನೆಲೆ-ಕಲೆ ಗಳನ್ನು ಅರಿತುಕೊಂಡರು. ಕಲ್ಯಾಣದ ಶಿವಶರಣರು ನಾಡಿ ನಲ್ಲಿ ತಂದ ಹೊಸ ಹುಟ್ಟನ್ನು, ಮಾನವಕೋಟಿಗೆ ಅವರು ಗೈದ ಸೇವೆಯನ್ನು ಮನದಟ್ಟು ಮಾಡಿಕೊಂಡರು. ತಾವೂ ಅವರಂತೆಯೇ ಜನಕೋಟಿಗಾಗಿ ದುಡಿಯುವ ಮನಸ್ಸುಳ್ಳವ ರಾದರು.

ಗುರುಸಿದ್ಧಸ್ವಾಮಿಗಳ ಸಂಪೂರ್ಣ ಅನುಗ್ರಹ ಚೆನ್ನ ಬಸವಸ್ವಾಮಿಗಳಿಗೆ ಆಯಿತು. ಗುರು ಮುಟ್ಟಿ ಗುರುವಾದರು.

ಆದವಾನಿ ಮಠದಲ್ಲಿ ಒಬ್ಬ ಬಾಲಕನಿದ್ದ; ಆತನ ಹೆಸರು ಕರಿಬಸವ. ಆತನ ಮೇಲೆ ಚೆನ್ನಬಸವ ಸ್ವಾಮಿಗಳಿಗೆ ಬಹು ಪ್ರೀತಿ. ಆ ಬಾಲಕನ ವಿದ್ಯಾಭ್ಯಾಸದ ಹೊಣೆಯನ್ನು ತಾವೇ



ವಹಿಸಿಕೊಂಡರು. ಅವನಿಗೆ ಶಿವಾನುಭವಶಾಸ್ತ್ರ ಬೋಧಿಸಿದರು. ಪ್ರೀತಿಯಿಂದ ಅನುಗ್ರಹ ಮಾಡಿದರು.

ಗುರುಸಿದ್ಧ ಸ್ವಾಮಿಗಳು ಚೆನ್ನಬಸವ ಸ್ವಾಮಿಗಳಿಗೆ ನಿರಾಬಾರಿಚರ ಪಟಾಧಿಕಾರವನ್ನು ಕರುಣಿಸಿದರು. ವೈರಾಗ್ಯ ನಿಧಿಯಾಗಿ, ಊರೂರು ಸಂಚರಿಸಿ ಶಿವಾನುಭವ ತತ್ವಗಳನ್ನು ಜನರಿಗೆ ಬೋಧಿಸಿ ಶಿವಾನುಭವ ಚರಚಕ್ರವರ್ತಿಗಳಾಗಿರೆಂದು ಆಶೀರ್ವದಿಸಿದರು. ಚೆನ್ನಬಸವಸ್ವಾಮಿಗಳು ಮನೆಯಿಂದ

ತಂದ ಬಸವಣ್ಣನವರ ವಚನಗಳ ಕಟ್ಟು ಇದ್ದೇ ಇತ್ತು. ಗುರುಸಿದ್ಧಸ್ವಾಮಿಗಳು ಚೆನ್ನಬಸವಣ್ಣನವರ ಗ್ರಂಥಗಳನ್ನು ಕೊಟ್ಟರು. ಹೊಸಕೊಡೆಯೊಂದನ್ನು ಕರುಣಿಸಿದರು. ಕ್ರಿಯಾಘಟ್ಟಿಯನ್ನು ಕೂಡ ಮಾಡಿದರು.

ಬಗಲಿಗೆ ಕ್ರಿಯಾಘಟ್ಟಿ, ಹೆಗಲಿಗೆ ಕಂಬಳಿ. ಬೆನ್ನಿಗೆ ಶಿವಾನುಭವ ಗ್ರಂಥಗಳು, ಕೈಯಲ್ಲಿ ಕೊಡೆ. ರಾಚೋಟಿ ಸ್ವಾಮಿಗಳ ಆಶೀರ್ವಾದ ಅಪ್ಪಣೆ ಪಡೆದು ಚೆನ್ನಬಸವ ಸ್ವಾಮಿಗಳು ಆದವಾನಿ ಬಿಟ್ಟರು. ಹಳ್ಳಿಗೆ ಒಂದು ರಾತ್ರಿ, ಪಟ್ಟಣಕ್ಕೆ ಐದು ರಾತ್ರಿಗಳಂತೆ ಇದ್ದು ಶಿವಾನುಭವ ಬೋಧೆ ಮಾಡುತ್ತ ಸಂಚರಿಸತೊಡಗಿದರು.

## ನಾರದಗಡ್ಡೆಗೆ ಆಗಮನ

ಚೆನ್ನಬಸವಸ್ವಾಮಿಗಳು ನಾಡಿನುದ್ದಗಲಕ್ಕೂ ಹನ್ನೆರಡು ವರ್ಷ ಸಂಚರಿಸಿದರು. ನೀಲಮ್ಮ ಐಕ್ಯವಾದ ತಂಗಡಿಗಿಗೆ ಹೋದರು; ಕಪ್ಪಡಿಸಂಗಮಕ್ಕೆ ನಡೆದರು. ಉಳವಿ ಸಂದರ್ಶಿಸಿದರು. ಎಡೆಯೂರಿಗೆ ಹೋದರು, ಕನ್ನಡನಾಡಿನಲ್ಲಿರುವ ಶರಣರ ಪುಣ್ಯ ಸ್ಥಳಗಳನ್ನೆಲ್ಲ ನೋಡಿದರು. ಅದರಿಂದ ಅವರ ಹೃದಯ ಹಿಗ್ಗಿತು: ಆತ್ಮ ಅರಳಿತು.

ಸಂಚಾರದಲ್ಲಿ ಚೆನ್ನಬಸವಸ್ವಾಮಿಗಳಿಗೆ ಒಂದು ಕಡೆ ನೆಲೆ ನಿಲ್ಲುವ ಮನಸ್ಸಾಯಿತು. ಒಳ್ಳೆಯ ಸ್ಥಳ ಅವರಿಗೆ ಬೇಕಾಗಿತ್ತು. ಅದನ್ನು ಕೇಂದ್ರವನ್ನಾಗಿ ಮಾಡಿಕೊಂಡು ಶಿವಾನುಭವ ಪ್ರಸಾರ ಕಾರ್ಯ ನಡೆಸುವ ಇಚ್ಛೆ ಅವರದಾಗಿತ್ತು.

ಅವರು ಶ್ರೀಶೈಲಕ್ಕೆ ಬಂದರು. ಅದು ರಮ್ಯಕ್ಷೇತ್ರ, ಪುಣ್ಯಕ್ಷೇತ್ರ. ಅಲ್ಲಿಯ ಪ್ರತಿವಸ್ತುವೂ ಶಿವಾನುಭವದ ಉಸಿ

ರಾಡುತ್ತಿರುವಂತೆ ಅವರಿಗೆ ಕಂಡಿತು. ಮಾದರಸ, ಮಲ್ಲರಸ, ಅಕ್ಕಮಹಾದೇವಿ, ಅಲ್ಲಮಪ್ರಭು ಮುಂತಾದ ಶರಣರಿಂದ ಪವಿತ್ರಗೊಂಡ, ಚೆನ್ನಮಲ್ಲಿಕಾರ್ಜುನ ನೆಲಸಿದ ಆ ಸ್ಥಳ ಅವರಿಗೆ ದಿವ್ಯಶಕ್ತಿಯನ್ನಿತ್ತಿತು.

ಪಾತಾಳಗಂಗೆಯಲ್ಲಿ ಮಿಂದು ಮಲ್ಲಿಕಾರ್ಜುನನ ದರ್ಶನ ಪಡೆದರು. ಸಿದ್ಧರಾಮ ಜಿಗಿದ ಕೊಳ್ಳ ನೋಡಿದರು; ಸಿದ್ಧ ರಾಮನನ್ನೇ ನೋಡಿದಂತಾಯಿತು. ಶ್ರೀಶೈಲದ ತುಂಬ ಓಡಾಡಿದರು. ಅಲ್ಲಿ ಉಲಿಯುವ ಪಕ್ಷಿಗಳ ಧ್ವನಿಯಲ್ಲಿ ಶರ ಣರ ವಚನಗಳನ್ನು ಕೇಳಿದರು. ಕದಳಿ ವನಕ್ಕೆ ಹೋದರು. ಚೆನ್ನಬಸವ ಸ್ವಾಮಿಗಳು ಕದಳಿ ವನದಲ್ಲಿ ಕೆಲವು ದಿನ ತಪಸ್ಸನ್ನಾಚರಿಸಿದರು. ಶ್ರೀಶೈಲದಲ್ಲಿ ವಾಸಿಸುವ ಚಂಚರಿಗೆ ಬೋಧೆ ಮಾಡಿದರು. ನಾಲ್ಕಾರು ತಿಂಗಳು ಶ್ರೀಶೈಲದಲ್ಲಿದ್ದು ಅಲ್ಲಿಂದ ಹೊರಟರು.

ಅಲ್ಲಿ ಇಲ್ಲಿ ಸಂಚಾರಮಾಡುತ್ತ ರಾಯಚೂರಿಗೆ ಬಂದರು. ಅಲ್ಲಿಂದ ಪೂರ್ವಕ್ಕೆ ಪ್ರಯಾಣ ಬೆಳೆಸಿದರು. ಕೃಷ್ಣಾನದಿ ತುಂಬಿ ಹರಿಯುತ್ತಿತ್ತು. ಜಿಟಜಿಟ ಹನಿ ಬೇರೆ, ಶ್ರಾವಣ ಮಾಸ. ಅಂಬಿಗರು ಹರಿಗೋಲು ಹಾಕಲು ಒಲ್ಲೆಂದರು. ಚೆನ್ನಬಸವ ಸ್ವಾಮಿಗಳು ನದಿಯನ್ನು ದಿಟ್ಟಿಸಿ ನೋಡಿದರು, ತಲೆಯೆತ್ತಿ ಮುಂದೆ ನೋಡಿದರು. ಗುರುವನ್ನು ನೆನೆದರು. ಹೊಳೆಗೆ ಧುಮುಕಿದರು. ಈಜುತ್ತ ಕೃಷ್ಣೆಯ ನಡುವಿರುವ ನಾರದಗಡ್ಡೆಗೆ ಹೋದರು.

ಆ ಸ್ಥಳ ಅವರಿಗೆ ಹಿಡಿಸಿತು. ತಮ್ಮ ಸಾಧನೆಗೆ ಯೋಗ್ಯ ಸ್ಥಾನವೆನಿಸಿತು.



ನಾರದಗಡ್ಡೆಯನ್ನು ಸುತ್ತುವರಿದ ಕೃಷ್ಣೆಯು ಬೆಟ್ಟದಲ್ಲಿ
ಹರಿದು ಇಳಿಯುವ ದೃಶ್ಯ

## ನಾರದಗಡ್ಡೆ

ರಾಯಚೂರಿನಿಂದ ಪೂರ್ವಕ್ಕೆ ರಾಯಚೂರು–ಗದ್ವಾಲ ಮಾರ್ಗದಲ್ಲಿ 18 ಮೈಲುಗಳ ಅಂತರದಲ್ಲಿ ನಾರದಗಡ್ಡೆ ಕ್ಷೇತ್ರವಿದೆ. ಇದು ಕೃಷ್ಣೆಯ ನಡುವಿನ ಒಂದು ಚಿಕ್ಕ ದ್ವೀಪ. ಕೃಷ್ಣಾ ನದಿಯಲ್ಲಿ ಏಳೆಂಟು ಮೈಲುಗಳ ಅಂತರದಲ್ಲಿ ಐದು ಗಡ್ಡೆ(ದ್ವೀಪ)ಗಳಿವೆ. ಇವುಗಳಲ್ಲಿ ರಾಮುಗಡ್ಡೆ, ಕುರುಮ ಗಡ್ಡೆ ಮತ್ತು ನಾರದಗಡ್ಡೆ ದೊಡ್ಡವು. ಪ್ರಮಥ ದ್ವೀಪ ಮತ್ತು ಶಿವದ್ವೀಪಗಳು ತೀರ ಚಿಕ್ಕವು.

ನಾರದಗಡ್ಡೆ ಬಹು ಪುರಾತನವಾದ ಕ್ಷೇತ್ರ. ನಿಸರ್ಗದ ಚೆಲುವಿನಿಂದ ಕೂಡಿದ ಪುಣ್ಯಕ್ಷೇತ್ರ. ಇದು ಸುಮಾರು 125 ಎಕರೆಯಷ್ಟು ವಿಸ್ತಾರವಾಗಿದ್ದು, ಮಾವಿನ ಎಲೆಯ ಆಕಾರ



ನಾರದಗಡ್ಡೆಯ ನಾರದ ದೇವಾಲಯದ ದೃಶ್ಯ

ದಲ್ಲಿದೆ. ಪಶ್ಚಿಮಕ್ಕೆ ತೂಬು, ಪೂರ್ವಕ್ಕೆ ಎಲೆಯ ತುದಿ. ಈ ತುದಿಯಲ್ಲಿಯೇ ಮತ್ತೆ ಕೃಷ್ಣೆಯ ಕವಲುಗಳು ಒಂದುಗೂಡಿ ಹರಿಯುತ್ತವೆ. ಈ ಸ್ಥಳದಲ್ಲಿಯೇ ಪುರಾತನವಾದ ನಾರದ ಮುನೀಶ್ವರ ದೇವಾಲಯವಿದೆ.

ನಾರದ ಮುನೀಶ್ವರ ಮಂದಿರದ ಹಿಂದೆ ಕರ್ತೃ ಚೆನ್ನಬಸವಸ್ವಾಮಿಗಳ ಗದ್ದುಗೆ ಮತ್ತು ಯೋಗಮಂದಿರಗಳಿವೆ. ಇವು ಬಹು ಸುಂದರ ಕಟ್ಟಡಗಳು. ದಕ್ಷಿಣ ಭಾಗದಲ್ಲಿ ದಾಸೋಹ ಮಠ, ವಸತಿ ಮಂಟಪಗಳು ಮತ್ತು ಗೋಶಾಲೆ

ಗಳಿವೆ. ಉತ್ತರ ಭಾಗದಲ್ಲಿ ವಸತಿ ಗೃಹಗಳಿವೆ. ಪಶ್ಚಿಮದಲ್ಲಿ ಶಿವಪೂಜಾಗೃಹ ಮತ್ತು ಪಾಕಶಾಲೆಗಳಿವೆ.

ಇಲ್ಲಿ ಮೂರು ದ್ವಾರಗಳಿವೆ. ಪಶ್ಚಿಮದ್ವಾರ ಬಹಳ ದೊಡ್ಡದು. ಇದೇ ಮಹಾದ್ವಾರದಿಂದಲೇ ಯಾತ್ರಿಕರು ಕರ್ತೃ ಗದ್ದುಗೆಗೆ ಹೋಗುವರು. ಈ ದ್ವಾರದ ಮುಂದೆ ಪಶ್ಚಿಮಾಭಿಮುಖವಾಗಿ ರಥ ಬೀದಿಯಿದೆ. ಇದರ ಕೊನೆಯಲ್ಲಿ ಎದುರು ಬಸವನ ಗುಡಿಯಿದೆ.

ಕ್ಷೇತ್ರದ ದಂಡೆಗುಂಟ ಹೆಮ್ಮರಗಳಿವೆ. ಇಳಿಜಾರಿನಲ್ಲಿ ಹೊನ್ನಿನ ಕಣಗಳಂಥ ಜಿನುಗಾದ ಉಸುಕಿದೆ. ಹೊಳೆ ತುಂಬಿ ಹರಿಯುವಾಗ ನಾರದ ಮುನೀಶ್ವರ ಗುಡಿಯ ಮುಂದೆ



ನಾರದಗಡ್ಡೆ ಕ್ಷೇತ್ರದ ಮಹಾದ್ವಾರ

ನಿಂತು ನೋಡಬೇಕು, ರಮ್ಯ ದೃಶ್ಯ. ಸುತ್ತಲೂ ನೀರು, ಹಸಿರುಡುಗೆಯುಟ್ಟು ತೇಲುವ ದ್ವೀಪ.

ಪ್ರಶಾಂತತೆಯಿಂದ ತುಂಬಿದ ಇಲ್ಲಿಯ ವಾತಾವರಣ, ಪ್ರಕೃತಿಶ್ರೀ, ಜುಳುಜುಳು ಹರಿಯುವ ನದಿ – ಎಲ್ಲವೂ ಮನಸ್ಸನ್ನು ಶಿವದತ್ತ ಎಳೆದೊಯ್ಯುತ್ತವೆ.

ಗೋಶಾಲೆಯ ಹತ್ತಿರ ಒಂದು ಶಾಸನವಿದೆ. ಅದು 9ನೆಯ ಶತಮಾನದ ರಾಷ್ಟ್ರಕೂಟರ 2ನೆಯ ಕೃಷ್ಣನ ಕಾಲದ್ದು. ಅದರಲ್ಲಿ ಈ ಕ್ಷೇತ್ರದ ಭಟಾರರಿಗೆ (ಆಚಾರ್ಯರಿಗೆ) ದತ್ತಿಬಿಟ್ಟ ವಿಷಯವಿದೆ. "ಈ ಭೂಮಿಯನ್ನು ಯಾರೂ ಆಕ್ರಮಿಸ ಬಾರದು. ಯಾರಾದರೂ ಆಕ್ರಮಿಸಿದರೆ ಅವರಿಗೆ ಗಂಗಾ ನದಿಯಲ್ಲಿ ಸಾವಿರ ಆಕಳುಗಳನ್ನು ಕೊಂದಷ್ಟು ಪಾಪ ಬರುವುದು" ಎಂದು ಆ ಶಾಸನದಲ್ಲಿ ಉಕ್ತವಾಗಿದೆ.

ಈ ಕ್ಷೇತ್ರಕ್ಕೆ ನಾರದಗಡ್ಡೆ ಎಂಬ ಹೆಸರು ಬರಲು ಒಂದು ಪೌರಾಣಿಕ ಕಥೆಯಿದೆ. ನಾರದರು ಒಂದು ದಿನ ಹಾಡುತ್ತ ಕೈಲಾಸಕ್ಕೆ ಹೋದರಂತೆ. ಹಾಡಿನಲ್ಲಿ ಮೈಮರೆತು ನಡೆಯುವಾಗ ಕೈಲಾಸದ ದ್ವಾರದಲ್ಲಿದ್ದ ಒಬ್ಬ ಭಕ್ತನಿಗೆ ಆತನ ಕಾಲು ತಾಕಿತಂತೆ. ಆಗ ಆ ಭಕ್ತ, "ದೇವಲೋಕ ಗಳಿಂದ ವಂಚಿತನಾಗಿ ಭೂಲೋಕಕ್ಕೆ ಹೋಗು" ಎಂದು ಶಾಪ ಕೊಟ್ಟನಂತೆ. ನಾರದ ಶಿವನಲ್ಲಿ ಶಾಪವಿಮೋಚನೆಗಾಗಿ ಸೆರಗೊಡ್ಡಿ ಬೇಡಿದ. "ಭೂಮಿಯಲ್ಲಿ ಕೃಷ್ಣಾನದಿಯ ದ್ವೀಪ ವೊಂದರಲ್ಲಿ ತಪವನ್ನಾಚರಿಸು" ಎಂದು ಹೇಳಿದನಂತೆ ಶಿವ. ಅದರಂತೆ ನಾರದ ತಪವನ್ನಾಚರಿಸಿದ. ಶಿವ ಪ್ರತ್ಯಕ್ಷನಾಗಿ ಆತನನ್ನು ದೇವಲೋಕಕ್ಕೆ ಕರೆದೊಯ್ದ. ಇದು ಆ ಕಥೆ. ನಾರದ ಇಲ್ಲಿ ತಪಸ್ಸನ್ನಾಚರಿಸಿದ್ದಕ್ಕಾಗಿ ಇದಕ್ಕೆ 'ನಾರದಗಡ್ಡೆ'

ಎಂದು ಹೆಸರು ಬಂತು. ಅಲ್ಲಿ ನಾರದನ ಮಂದಿರ ನಿರ್ಮಾಣ ವಾಗಿ ನಾರದಲಿಂಗ ಸ್ಥಾಪನೆಯಾಯಿತು.

ಹದಿನೇಳನೆಯ ಶತಮಾನದ ಕವಿ ಸಿದ್ಧನಂಜೇಶನು, ಈ ಗಡ್ಡೆಯನ್ನೂ, ನಾರದನ ತಪಸ್ಸನ್ನೂ, ಚೆನ್ನಬಸವಸ್ವಾಮಿ ಗಳು ಇಲ್ಲಿಗೆ ಬಂದುದನ್ನೂ ತನ್ನ 'ಗುರುರಾಜ ಚಾರಿತ್ರ' ಎಂಬ ಕಾವ್ಯದಲ್ಲಿ ಹೀಗೆ ವರ್ಣಿಸಿದ್ದಾನೆ:-

ನಾರದ ಮಹಾಋಷಿಪ ಕೃಷ್ಣವೇಣಿಯ ನಡುವೆ
ರಾರಾಜಿಸುವ ಕುರುವದಲ್ಲುಗ್ರ ತಪಗೆಯ್ದು
ಮಾರಹರನೊಲವ ಪಡೆದಾ ಕ್ಷೇತ್ರವೆಸೆದುದುಂ ನಾರದ
ಗಡ್ಡೆಯುಮೆನುತಲಿ
ಚಾರುಜಂಗಮ ಮೂರ್ತಿಯಲ್ಲೊರ್ವ ನೆಲಸಿ ಸಲೆ
ಭೂರಿಜನರಿಂ ಪೂಜೆಗೊಳುತಿರುತಲೊಂದು ದಿನ
ಧೀರ ವ್ಯಾಘ್ರಾಸನದ ಮೇಲೆ ಕುಳಿತಾ ನದಿಯ ದಾಂಟಿದಂ
ಜಗ ಪೊಗಳಲು
ಈತ ಮಹಿಮಾಭರಣನೆಂದೆಲ್ಲರಡಿಗೆರಗಿ
ಸಾತಿಶಯ ನಾರದಗಡ್ಡೆಯ ಸ್ವಾಮಿಯೆಂದು ಪ್ರ
ಖ್ಯಾತಿ ವಡೆದಿರ್ದು ಶಿವಯೋಗಿ ಸುಸಮಾಧಿಯೊಳು
ಶಿವನ ಬೆರಸಿದನೆನುತಲಿ

ಚೆನ್ನಬಸವಸ್ವಾಮಿಗಳು ನಾರದಗಡ್ಡೆಗೆ ಬಂದಾಗ ಅಲ್ಲಿ ನಾರದಮುನೀಶ್ವರ ಗುಡಿಯೊಂದೇ ಇತ್ತು. ದ್ವೀಪದ ತುಂಬ ಕಾಡು ಬೆಳೆದಿತ್ತು. ಆ ಕಾಡಿನಲ್ಲಿ ಕಾಡು ಪ್ರಾಣಿಗಳಿದ್ದವು. ಹೆಚ್ಚಾಗಿ ಜನ ಆ ಗಡ್ಡೆಗೆ ಹೋಗುತ್ತಿರಲಿಲ್ಲ. ನಾರದ ಮುನೀ ಶ್ವರ ಲಿಂಗಕ್ಕೆ ಪೂಜೆ ಸಹ ನಿಂತುಹೋಗಿತ್ತು.

## ನಡೆದಾಡುವ ಶಿವಾನುಭವ ಮಂಟಪ

ಚೆನ್ನಬಸವ ಸ್ವಾಮಿಗಳಿಗೆ ನಾರದಗಡ್ಡೆ ಪ್ರಶಾಂತ ಸ್ಥಳ ವೆನಿಸಿತು. ಹನ್ನೆರಡು ವರ್ಷ ಸಂಚಾರಮಾಡಿದ ಅವರಿಗೆ ಒಂದಿಷ್ಟು ವಿಶ್ರಾಂತಿ ಬೇಕಾಗಿತ್ತು. ಅಲ್ಲಿ ತಮ್ಮ ಅನುಷ್ಠಾನ ವನ್ನು ಪ್ರಾರಂಭಿಸಿದರು. ಮೂರು ನಾಲ್ಕು ತಿಂಗಳ ಅನು ಷ್ಠಾನ ಸಾಕೆನಿಸಿತು. ಅವರಿಗೆ ಏಕಾಂತ ಬೇಸರ. ಜನರು ಬೇಕು. ಅವರಿದ್ದುದೇ ಜನರಿಗಾಗಿ. ಜನರ ಯೋಗಕ್ಷೇಮವೇ ಅವರಿಗೆ ಲಿಂಗಪೂಜೆಯಾಗಿತ್ತು. ಜನರೊಡನೆ ಬೆರೆಯು ವುದು, ಅವರೊಡನೆ ಮಾತನಾಡುವುದು, ಅವರ ಅನುವು-ಆಪತ್ತುಗಳನ್ನು ಕೇಳುವುದು, ಅವರಿಗೆ ಉಪದೇಶ ಮಾಡು ವುದು, ನೊಂದವರಿಗೆ ಸಾಂತ್ವನ ಹೇಳುವುದು, ಎದೆಗುಂದಿ ದವರಿಗೆ ಧೈರ್ಯ ತಂದುಕೊಡುವುದು, ದಾರಿತಪ್ಪಿದವರಿಗೆ ನೀತಿಬೋಧೆ ಮಾಡುವುದು ಅವರ ಪ್ರಿಯವಾದ ಕೆಲಸ ವಾಗಿತ್ತು. ಅವರ ಲಿಂಗಪೂಜೆ ಬಹಳ ಹೊತ್ತಿನದಾಗಿರಲಿಲ್ಲ. ಅದಕ್ಕೆ ಆ ಸ್ಥಳ ಈ ಸ್ಥಳ ಬೇಕೆಂದೇನೂ ಇರಲಿಲ್ಲ. ಪೂಜೆ ಗಾಗಿ ಹೆಚ್ಚು ಸಾಮಗ್ರಿಗಳ ಅವಶ್ಯಕತೆಯೂ ಇರಲಿಲ್ಲ. ಭಸ್ಮದ ಗಟ್ಟಿಯಂತೂ ಯಾವಾಗಲೂ ಅವರ ಬಗಲಲ್ಲಿರುತ್ತಿತ್ತು. ಅದರೊಂದಿಗೆ ಒಂದೆರಡು ಬಿಲ್ವದಳಗಳೂ ಇರುತ್ತಿದ್ದುವು. ಬಾವಿಯೋ ಕೆರೆಯೋ ಇದ್ದಲ್ಲಿ ಮಿಂದು ಅಲ್ಲಿಯೇ ಒತ್ತಟ್ಟಿಗೆ ಕೊಡೆಯೇರಿಸಿ ಅದರ ನೆರಳಿನಲ್ಲಿ ಕುಳಿತು ಕೆಲ ನಿಮಿಷಗಳಲ್ಲಿ ಲಿಂಗಪೂಜೆ ಮುಗಿಸಿಬಿಡುತ್ತಿದ್ದರು. ಭಕ್ತರ ಮನೆಗೆ ಹೋದರೆ ಅಲ್ಲಿಯೂ ಲಿಂಗಪೂಜೆ ಬಹಳ ಹೊತ್ತು ಮಾಡು ತ್ತಿರಲಿಲ್ಲ. ಮನೆಯವರನ್ನೆಲ್ಲ ತಮ್ಮ ಜೊತೆಗೆ ಲಿಂಗಪೂಜೆಗೆ

ಕೂರಿಸಿಕೊಂಡು ಅವರಿಗೆ ಶಿವಾನುಭವ ಬೋಧೆ ಮಾಡು ತ್ತಿದ್ದರು.

ನಾರದಗಡ್ಡೆಯಿಂದ ಅವರು ಸಂಚಾರ ಪ್ರಾರಂಭಿಸಿದರು. ಒಂದೊಂದು ದಿನ ಒಂದೊಂದು ಹಳ್ಳಿಯಲ್ಲಿ ಶಿವಾನುಭವ. ಮೂರುನಾಲ್ಕು ದಿನಗಳ ಬಳಿಕ ಗಡ್ಡೆಗೆ ಬರುವರು. ಅನಂತರ ಮಾರನೆಯ ದಿನ ಪ್ರಯಾಣ. ಕೆಲವು ದಿನಗಳಲ್ಲಿಯೇ ಸುತ್ತ ಹತ್ತು ಹರದಾರಿಯವರೆಗೆ ಚೆನ್ನಬಸವ ಸ್ವಾಮಿಗಳ ಹೆಸರು ಕೇಳಿಬರತೊಡಗಿತು. ಅವರು ನಾರದಗಡ್ಡೆಯಲ್ಲಿ ವಾಸವಾಗಿದ್ದುದರಿಂದ 'ಗಡ್ಡೆ ತಾತ' ಎಂದೂ, ಅವರು ಯಾವಾಗಲೂ ಕೊಡೆ ಹಿಡಿದಿರುತ್ತಿದ್ದುದರಿಂದ 'ಕೊಡೆತಾತ' ಎಂದೂ ಜನ ಕರೆಯುತೊಡಗಿದರು! ಜನರು ಗಡ್ಡೆಗೆ ಬರತೊಡಗಿದರು. ಗಡ್ಡೆಯಲ್ಲಿ ಶಿವಾನುಭವ ನಡೆಯುತೊಡಗಿತು. ಗಡ್ಡೆಗೆ ಜನ ಬರತೊಡಗಿದ ಬಳಿಕ ಅಲ್ಲಿ ನಾರದಮುನೀಶ್ವರ ಗುಡಿಯ ಹಿಂದೆ ಸ್ವಾಮಿಗಳಿಗೆ ಒಂದು ಯೋಗಮಂದಿರ ಮತ್ತು ಜನಗಳಿಗೆ ಇಳಿದುಕೊಳ್ಳಲು ಒಂದೆರಡು ಮಂಟಪಗಳು ಕಟ್ಟಲಾಯಿತು.

ಚೆನ್ನಬಸವ ಸ್ವಾಮಿಗಳು ಗದ್ವಾಲ, ಕರ್ನೂಲು, ಹೈದರಾಬಾದು ಮುಂತಾದ ದೂರದ ಸ್ಥಳಗಳಿಗೂ ಶಿವಾನುಭವಕ್ಕೆ ಹೋಗಿಬರುತ್ತಿದ್ದರು. ಗಡ್ಡೆಯ ಸುತ್ತಮುತ್ತಲ ಹಳ್ಳಿಗಳಿಗಂತೂ ಅವರು ತಿಂಗಳಿನಲ್ಲಿ ಒಂದೆರಡು ಸಲ ತಪ್ಪದೆ ಹೋಗಿಬರುತ್ತಿದ್ದರು. ಮಾನ್ವಿ, ದೇವದುರ್ಗ, ಲಿಂಗಸೂಗೂರು, ಕಲ್ಲೂರು, ಕಾಡ್ಲೂರು, ನೇರಡಗುಂಭ, ಮಕ್ತಲ್ ಮುಂತಾದ ಕಡೆ ಅವರು ಹೋದುದುಂಟು. ಅವರು ಸಾಮಾನ್ಯ ಜನರಿಗೆ ಗಡ್ಡೆತಾತನಾಗಿ ಕಂಡರೆ ಅನುಭಾವಿಗಳಿಗೆ ನಡೆದಾಡುವ ಶಿವಾನುಭವ ಮಂಟಪವಾಗಿ ಕಾಣುತ್ತಿದ್ದರು.

ದುಃಖಿಗಳನ್ನು, ನೊಂದವರನ್ನು ಕಂಡರೆ ಮೊದಲು ಅವರನ್ನು ಸಂತೈಸುತ್ತಿದ್ದರು; ಎಷ್ಟೋ ಸಲ ಅಂಥವರನ್ನು ತಮ್ಮ ಜೊತೆಗೆ ಕರೆದುಕೊಂಡು ತಿರುಗಾಡಿದ್ದುಂಟು. ನೊಂದವರಿಗೆ, ದುಃಖಿಗಳಿಗೆ, ದಿಕ್ಕಿಲ್ಲದವರಿಗೆ ನಾರದಗಡ್ಡೆ ಆಶ್ರಯ ಸ್ಥಾನವಾಯಿತು.

## "ನಿಜವಾದ ವೈರಾಗ್ಯ ನಿಧಿ...."

ಅನೇಕ ವರ್ಷಗಳಿಂದ ಆದವಾನಿಗೆ ಹೋಗಿರಲಿಲ್ಲವಾಗಿ ಮನಸ್ಸು ಎಳೆಯುತ್ತಿತ್ತು. ಇಬ್ಬರು ಶಿಷ್ಯರೊಡನೆ ಹೊರಟರು. ದಾರಿಯಲ್ಲಿ ಬರುವ ಹಳ್ಳಿಗಳಲ್ಲಿ ಶಿವಾನುಭವ ನಡೆಸುತ್ತ ಹೋಗಿ ಆದವಾನಿ ಮುಟ್ಟಿದರು.

ಗುರುಸಿದ್ಧಸ್ವಾಮಿಗಳು ಮುಪ್ಪಿನಿಂದ ಮೆತ್ತಗಾಗಿದ್ದರು. ಚೆನ್ನಬಸವ ಸ್ವಾಮಿಗಳನ್ನು ಕಂಡು ಅವರಿಗೆ ಅತೀವ ಆನಂದವಾಯಿತು. ಕೆಲದಿನಗಳಿಂದ ಅವರು ಚೆನ್ನಬಸವ ಸ್ವಾಮಿಗಳನ್ನು ಧೇನಿಸುತ್ತಿದ್ದರು. ಇನ್ನು ಕೆಲವು ದಿನ ತಡೆದಿದ್ದರೆ ಅವರೇ ಚೆನ್ನಬಸವ ಸ್ವಾಮಿಗಳನ್ನು ಕರೆಯಲು ಕಳಿಸುತ್ತಿದ್ದರು.

ಆದವಾನಿಯ ಶೂನ್ಯ ಪೀಠವನ್ನು ಚೆನ್ನಬಸವ ಸ್ವಾಮಿಗಳಿಗೆ ಒಪ್ಪಿಸುವ ಮನಸ್ಸುಳ್ಳವರಾಗಿದ್ದರು ಗುರುಸಿದ್ಧ ಸ್ವಾಮಿಗಳು. ಭಕ್ತರನ್ನು ನೆರೆಸಿ ಅವರ ಮುಂದೆ ಈ ಪ್ರಸ್ತಾಪವನ್ನಿಟ್ಟರು. ಭಕ್ತರು ಒಪ್ಪಿದರು. ಆದರೆ ಚೆನ್ನಬಸವ ಸ್ವಾಮಿಗಳು ಒಪ್ಪಲಿಲ್ಲ.

"ನನಗೆ ನನ್ನ ಸ್ಥಳವಿದೆ, ಸಂಚಾರವಿದೆ. ನನಗೆ ಅಷ್ಟೇ ಸಾಕು. ಇಂಥ ದೊಡ್ಡ ಪೀಠದ ಭಾರ ನಾನು ಹೊರಲಾರೆ. ಅಲ್ಲದೆ ನಾನು ಯಾವಾಗಲೂ ಒಂದು ಕಡೆ ನೆಲಸಿ ಇರಲಾರೆ.

ಭಕ್ತರಿದ್ದಲ್ಲಿಗೆ ಹೋಗುವ ಸ್ವಭಾವ ನನ್ನದು. ಈ ಕೆಲಸ ನನಗೆ ಬಹಳ ಪ್ರಿಯವಾದುದು. ಆದುದರಿಂದ ಈ ಯಾದವ ಪೀಠವನ್ನು ನಾನು ಒಲ್ಲೆ. ನನ್ನ ಶಿಷ್ಯನಾದ ಕರಿಬಸವಸ್ವಾಮಿಯನ್ನು ಸ್ವಾಮಿಯನ್ನಾಗಿ ಮಾಡಿರಿ" ಎಂದರು ಚೆನ್ನಬಸವಸ್ವಾಮಿಗಳು. ಆದವಾನಿಯ ಭಕ್ತರು, ಗುರುಸಿದ್ಧಸ್ವಾಮಿಗಳು ಎಷ್ಟು ಒತ್ತಾಯ ಮಾಡಿದರೂ ಶೂನ್ಯಪೀಠಕ್ಕೆ ಒಡೆಯರಾಗಲು ಚೆನ್ನಬಸವಸ್ವಾಮಿಗಳು ಒಪ್ಪಲಿಲ್ಲ. ಅವರ ತ್ಯಾಗ ಮನೋಭಾವಕ್ಕೆ ಸರ್ವರೂ ಮೆಚ್ಚಿದರು. ಅವರ ಇಚ್ಛೆಯಂತೆ ಕರಿಬಸವಸ್ವಾಮಿಗಳನ್ನು ಆ ಪೀಠದಲ್ಲಿ ಕುಳ್ಳಿರಿಸಿದರು.

ಹಿಂದೆ ಚೆನ್ನಬಸವಸ್ವಾಮಿಗಳು ಅನುಗ್ರಹ ಮಾಡಿದವರೇ ಈ ಕರಿಬಸವಸ್ವಾಮಿಗಳು. ಅವರು ಶಿಕ್ಷಣ ಮುಗಿಸಿ, ಸಂಚಾರಮಾಡಿ ಬಂದಿದ್ದರು. ಷಟ್‌ಸ್ಥಲಜ್ಞಾನಿಗಳಾಗಿದ್ದರು. ಈ ಕರಿಬಸವಸ್ವಾಮಿಗಳು ಮುಂದೆ ಉರುವಕೊಂಡೆಗೆ ಹೋದರು. ಅಲ್ಲಿಂದ ಇದೊಂದು ಸಂಪ್ರದಾಯವೇ ಬೆಳೆಯಿತು. ಉರುವಕೊಂಡೆಯ ಶೂನ್ಯಪೀಠಕ್ಕೆ ನಾರದಗಡ್ಡೆಯಿಂದಲೇ ಸ್ವಾಮಿಗಳು ಹೋಗಬೇಕು, ಅವರು ನಾರದಗಡ್ಡೆಯ ಸ್ವಾಮಿಗಳಿಂದ ಅನುಗ್ರಹ ಹೊಂದಿರಬೇಕು.

ಇನ್ನೊಂದು ಸಂಪ್ರದಾಯವೂ ಇದುವರೆಗೆ ನಡೆದುಕೊಂಡು ಬಂದಿದೆ. ನಾರದಗಡ್ಡೆಯ ಜಾತ್ರೆಯಾದ ಬಳಿಕ ಉರುವಕೊಂಡೆಯ ಜಾತ್ರೆಯಾಗುತ್ತದೆ. ನಾರದಗಡ್ಡೆಯ ತೇರಿನ ಧ್ವಜಗಳನ್ನು ಒಯ್ದು ಉರುವಕೊಂಡೆಯ ತೇರಿಗೆ ಹಚ್ಚುವರು. ಹೀಗೆ ನಾರದಗಡ್ಡೆ ಮತ್ತು ಉರುವಕೊಂಡೆಯ ನಡುವಿನ ಅನ್ಯೋನ್ಯ ಸಂಬಂಧ ತುಂಬ ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ನಾರದಗಡ್ಡೆಯ ಚೆನ್ನಬಸವ ಸ್ವಾಮಿಗಳ ವೈರಾಗ್ಯ,

ತ್ಯಾಗ ಮತ್ತು ಶಿವಾನುಭವ ಕಾರ್ಯ ಗುರುಸಿದ್ಧ ಸ್ವಾಮಿಗಳಿಗೆ ಬಹಳ ಮೆಚ್ಚುಗೆಯಾದುವು. "ನೀವು ನಿಜವಾದ ವೈರಾಗ್ಯನಿಧಿಗಳು, ನಿಜವಾದ ಶಿವಾನುಭವ ಚರಚಕ್ರವರ್ತಿಗಳು" ಎಂದು ಕೊಂಡಾಡಿದರು.

## ಶಿವಾನುಭವ

ಗಡ್ಡಿತಾತನವರ ಮಾತೆಂದರೆ ಎಲ್ಲರಿಗೂ ಪ್ರಿಯ. ಅವರು ಯಾವುದೇ ಊರಿಗೆ ಬರಲಿ ಎಲ್ಲರೂ ಸ್ವಾಗತಿಸುವರು. ಚಿಕ್ಕವರಿಗಂತೂ ಕಥೆ ಹೇಳುವ ತಾತ. ಶರಣರ ಚರಿತ್ರೆಗಳನ್ನು ಗಡ್ಡಿತಾತ ಕಥೆಯಂತೆ ಹೇಳುವ ರೀತಿ ಬಹು ಸೊಗಸಾಗಿತ್ತು. ಅದು ಮಕ್ಕಳಾದಿಯಾಗಿ ಎಲ್ಲರನ್ನೂ ಆಕರ್ಷಿಸುತ್ತಿತ್ತು. ವೀರಶೈವರಿಗೆ, ಆ ತತ್ವದಲ್ಲಿ ಆಸಕ್ತಿಯಿದ್ದವರಿಗೆ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಮುಂತಾದುವುಗಳನ್ನು ಸುಲಭವಾಗಿ ತಿಳಿಯುವಂತೆ ಹೇಳುತ್ತಿದ್ದರು. ಇನ್ನುಳಿದವರಿಗೆ ಪರಿಶುದ್ಧವಾಗಿ ಬದುಕುವ ದಾರಿಯನ್ನು ಹೇಳಿಕೊಡುತ್ತಿದ್ದರು. ಅವರಿಗೆ ಸರ್ವರೂ ಬೇಕಾಗಿದ್ದರು. ಸರ್ವರ ಉದ್ಧಾರ ಅವರ ಗುರಿಯಾಗಿತ್ತು. "ಈ ಅಯ್ಯನಿಗೆ ಕುಲಜಾತಿ, ಭೇದವಿಲ್ಲ, ಯಾರ ಮನೆಗೆ ಬೇಕೋ ಅವರ ಮನೆಗೆ ಹೋಗುತ್ತಾನೆ; ಯಾರಿಗೆ ಬೇಕೊ ಅವರಿಗೆ ತತ್ವ ಹೇಳುತ್ತಾನೆ. ತತ್ವ, ಷಟ್‌ಸ್ಥಲ ಜ್ಞಾನ ಬೀದಿಯ ವಸ್ತುವೇ?" ಎಂದು ಕರ್ಮಠರು ಅವರನ್ನು ದೂರುತ್ತಿದ್ದರು. ಇದಾವುದನ್ನೂ ಗಡ್ಡಿತಾತ ಲಕ್ಷಿಸಲಿಲ್ಲ. ತಮ್ಮ ಕಾಯಕ ತಾವು ಮುಂದುವರಿಸಿದರು.

ಗಡ್ಡಿತಾತನವರ ಉಪದೇಶ ಕೇಳಿ ಅನೇಕರು ಲಿಂಗ ಧರಿಸಿಕೊಳ್ಳುವ ಇಚ್ಛೆ ವ್ಯಕ್ತಪಡಿಸಿದರು. "ನೀವು ಮೊದಲು ಮನಸ್ಸಿನಿಂದ ಪರಿಶುದ್ಧರಾಗಿರಿ. ಅದು ಲಿಂಗಧರಿಸುವಷ್ಟೇ

ಮಹತ್ವದ್ದು. ಮನಸ್ಸು ಶುದ್ಧವಿಲ್ಲದೆ ಯಾವ ಲಾಂಛನ ಧರಿಸಿದರೂ ಲಾಭವಿಲ್ಲ. ಮನಸ್ಸು, ಹೃದಯ ಶುದ್ಧವಾಗಿಟ್ಟು ಕೊಂಡವರಿಗೆ ಲಿಂಗಧರಿಸದಿದ್ದರೂ ನಡೆದೀತು. ಲಿಂಗ ಸಮಾನತೆಯ ಕುರುಹು, ಇದನ್ನು ಧರಿಸಿದವರೆಲ್ಲರೂ ಸಮಾನರು; ಇಲ್ಲಿ ಮೇಲಿಲ್ಲ, ಕೀಳಿಲ್ಲ; ಜಾತಿಭೇದವಿಲ್ಲ. ಇದು ನಮ್ಮ ಅಂತರಂಗಶಕ್ತಿಯ ಚಿಹ್ನೆ; ಅರಿವಿನ ಕುರುಹು. ಇದರ ಪೂಜೆಯಿಂದ ನಮ್ಮ ಸರ್ವಾಂಗಗಳು ಶುದ್ಧವಾಗುವುವು; ನಡೆ - ನುಡಿಯಲ್ಲಿ ಏಕತೆ ಬರುವುದು. ಸರ್ವಜೀವರೂ ಒಂದೆಂಬ ಭಾವ ನೆಲೆಸುವುದು; ಸಕಲ ಜೀವರಾಶಿಗಳಲ್ಲಿ ಅನುಕಂಪೆ ಮೂಡುವುದು. ಇದನ್ನು ಧರಿಸುವುದರಿಂದ ನಮ್ಮ ದೇಹ ದೇವಾಲಯವಾಗುವುದು. ಅನ್ಯದೇವಾಲಯಗಳಿಗೆ ನಾವು ಹೋಗುವುದು ಬೇಕಾಗಿಲ್ಲ; ನಮ್ಮ ದೇವರು ಯಾವಾಗಲೂ ನಮ್ಮಲ್ಲಿಯೇ ಇರುವನು, ಮನಸ್ಸು ಬಂದಾಗ ನಾವು ಪೂಜೆ ಮಾಡಬಹುದು. ಯಾರ ಹಂಗೂ ಇಲ್ಲ. ದೇವಾಲಯಕ್ಕೆ ಹೋದರೆ ಅಲ್ಲಿ ಪೂಜಾರಿಯ ಹಂಗು; ಅಲ್ಲಿ ನಮ್ಮ ಕೈಯಿಂದ ನಾವು ದೇವರನ್ನು ಪೂಜಿಸಲಾರೆವು. ಲಿಂಗ ಧರಿಸಿದವರ ಮಾತು ಹಾಗಲ್ಲ. ಅವರ ಮತ್ತು ದೇವರ ನಡುವೆ ಯಾರೂ ಅಡ್ಡಬರುವುದಿಲ್ಲ. ತನ್ನ ದೇವರನ್ನು ತಾನೇ ಪೂಜಿಸಬಹುದು. ಅಲ್ಲದೆ ಈ ದೇವರಿಗೆ ಯಾವ ಕಾಣಿಕೆಯೂ ಬೇಡ. ಎಲ್ಲಿ ಬೇಕಾದಲ್ಲಿ ಕುಳಿತು, ಯಾವಾಗ ಬೇಕೋ ಆಗ ಪೂಜಿಸ ಬಹುದು.

ಇನ್ನೊಂದು ಮುಖ್ಯ ಮಾತೆಂದರೆ ನಮ್ಮ ದೇವರನ್ನು ನಾವೇ ಪೂಜಿಸಬೇಕು. ನಮಗಾಗಿ ಇನ್ನೊಬ್ಬರು ಪೂಜಿಸ ಬಾರದು. ಅದು ಸಲ್ಲದು. ಇನ್ನೊಬ್ಬರು ಉಂಡರೆ ನಮ್ಮ

ಹೊಟ್ಟೆ ತುಂಬುವುದೇ? ಇದನ್ನು ಕುರಿತು ಬಸವಣ್ಣನವರು ಒಂದು ಒಳ್ಳೆಯ ವಚನ ಹೇಳಿದ್ದಾರೆ:

"ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ,
ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ?"

ಚೆನ್ನಬಸವ ಸ್ವಾಮಿಗಳ ಉಪದೇಶದಿಂದ ಅನೇಕರು ಲಿಂಗಧಾರಿಗಳಾದರು. ಸ್ವಾಮಿಗಳು ಅರ್ಹರಾದವರಿಗೆಲ್ಲರಿಗೂ ಜಾತಿ ಮತ ಭೇದವಿಲ್ಲದೆ ಲಿಂಗದೀಕ್ಷೆ ನೀಡಿದರು.

ನಾಡಿನಲ್ಲಿ ಆ ಕಾಲಕ್ಕೆ ಅನೇಕ ಪಾಷಂಡಿಗಳ ಹಾವಳಿ ಹೆಚ್ಚಾಗಿತ್ತು. ಅವರು ಜನರನ್ನು ತಪ್ಪು ದಾರಿಗೆ ಎಳೆಯುತ್ತಿದ್ದರು. ದೇಹ ನಶ್ವರ; ಈ ಸಂಸಾರ, ಹೆಣ್ಣು, ಹೊನ್ನು, ಮಣ್ಣು ಇವೆಲ್ಲ ಮಾಯೆ; ಇವನ್ನು ನಂಬಬಾರದು ಎಂದು ಹೇಳುತ್ತಿದ್ದರು. ಹೀಗೆ ಹೇಳಿ, ಮನುಷ್ಯ ನಿರ್ವಿಕಾರನಾಗಿ ಏನು ಮಾಡಿದರೂ ನಡೆಯುತ್ತದೆ ಎಂದು ನುಡಿದು ಜನರನ್ನು ಅನಾಚಾರಕ್ಕೆ ಗುರಿಮಾಡಿದ್ದರು. ಈ ಸಂಸಾರಕ್ಕೂ ನಮಗೂ ಏನೂ ಸಂಬಂಧವಿಲ್ಲವೆಂದು ಹೇಳಿ ಜನರನ್ನು ದುಡಿತದಿಂದ ಬಿಡಿಸಿ ಸೋಮಾರಿಗಳನ್ನಾಗಿ ಮಾಡಿದ್ದರು. ಇಂಥಹ ಅನಾಚಾರಿಗಳ ವಿರುದ್ಧವಾಗಿ ಗಡ್ಡೆತಾತನವರು ದೃಢ ತಾತ್ವಿಕ ನಿಷ್ಠೆಯಿಂದ ಹೋರಾಡಬೇಕಾಯಿತು.

"ಈ ಸಂಸಾರ ಮಾಯೆಯಲ್ಲ. ಇದು ಶಿವನಿಂದ ಬಂದುದು, ಶಿವನಷ್ಟೇ ಸತ್ಯವಾದುದು. ಇದನ್ನು ಪ್ರೀತಿಸ

ಬೇಕು; ನಂಬಬೇಕು. "ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ; ಮಣ್ಣು ಮಾಯೆಯೆಂಬರು ಮಣ್ಣು ಮಾಯೆ ಯಲ್ಲ; ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ. ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ" ಎಂದು ಅಲ್ಲಮಪ್ರಭು ಹೇಳಿದ್ದಾರೆ. ನಿಜವಾಗಿ ನಮ್ಮ ಆಸೆಯೇ ಮಾಯೆ. ಈ ಆಸೆಯನ್ನು ಮೆಟ್ಟಬೇಕು. ಲಿಂಗ ಪೂಜೆ ಮತ್ತು ಜನಹಿತದಲ್ಲಿ ಮನಸ್ಸನ್ನು ತೊಡಗಿಸಬೇಕು. ಇದರಿಂದ ಆಸೆ ತನ್ನಷ್ಟಕ್ಕೆ ತಾನೇ ಕಳಚಿ ಬೀಳುವುದು.

"ಮನುಷ್ಯನಿಗೆ ಹೆಣ್ಣು, ಹೊನ್ನು, ಮಣ್ಣು ಎಲ್ಲವೂ ಬೇಕು. ಅವೆಲ್ಲ ಶಿವನ ಪ್ರಸಾದವೆಂದು ನಂಬಬೇಕು. ಎಲ್ಲರೂ ಸಂನ್ಯಾಸಿಗಳಾಗುವುದು ಸಾಧ್ಯವಿಲ್ಲ. ಸಾಧುವೂ ಅಲ್ಲ. ಅದ ಕ್ಕಾಗಿ ಉತ್ತಮ ಸಂಸಾರಿಯಾಗಿ ಬದುಕಬೇಕು. ಮನಸ್ಸು ಬಯಸಿದ್ದನ್ನು ಒಳ್ಳೆಯ ದಾರಿಯಿಂದ ಸಂಪಾದಿಸಬೇಕು. ಸಿದ್ಧರಾಮೇಶ್ವರರ ಈ ವಚನ ಸರ್ವರಿಗೂ ಆದರ್ಶವಾಗಿದೆ.

> "ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೂಡುವುದು,
> ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು,
> ಭಕ್ತನ ಮನ ಹೊನ್ನಿನೊಳಗಾದರೆ ಬಳಲಿ ದೊರಕಿಸುವುದು
> ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ"

"ಹೆಣ್ಣನ್ನು ಕೀಳೆಂದು ತಿಳಿಯುವುದು ನಮ್ಮ ಜನರ ಸ್ವಭಾವವಾಗಿಬಿಟ್ಟದೆ. ಆಕೆ ಮಾಡಿದ ತಪ್ಪಾದರೂ ಏನು? ನಮ್ಮನ್ನು ಹಡೆದದ್ದೇ ತಪ್ಪೇ? ನಮ್ಮನ್ನು ಜೋಪಾನ ಮಾಡಿದ್ದೇ ತಪ್ಪೇ? ನಮ್ಮ ಜೊತೆಗಿದ್ದು ಪ್ರೀತಿಯಿಂದ ಸಂಸಾರಮಾಡುವುದೂ ತಪ್ಪೇ? "ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನಾ"

ಎಂದು ಸಿದ್ಧರಾಮೇಶ್ವರರು ಹೇಳಿದ್ದಾರೆ. ಶರಣರ ದೃಷ್ಟಿ ಯಲ್ಲಿ ಹೆಣ್ಣೆಂದರೆ ದೇವರು.

"ಸಂಸಾರದಲ್ಲಿ ಗಂಡ–ಹೆಂಡಿರು ಇಬ್ಬರೂ ಭಕ್ತರು. ಇಬ್ಬರೂ ಸರಿಸಮಾನರು. ಜೇಡರ ದಾಸಿಮಯ್ಯ "ಸತಿಪತಿ ಗಳೊಂದಾದವನ ಭಕ್ತಿ ಹಿತವಾಗಿಪ್ಪುದು ಶಿವಂಗೆ; ಸತಿಪತಿ ಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರಿಸಿದಂತೆ ಕಾಣಾ ರಾಮನಾಥ" ಎಂದಿದ್ದಾನೆ. ಗಂಡಹೆಂಡಿರಿಬ್ಬರು ಒಂದೇ ತೆರನ ಭಕ್ತಿ ಮಾಡಬೇಕು. ಒಂದೇ ದೇವರನ್ನು ಪೂಜಿಸಬೇಕು. ಬಸವಣ್ಣನವರ ಈ ವಚನವನ್ನು ಕೇಳಿರಿ: "ಗಂಡ ಶಿವಲಿಂಗದೇವರ ಭಕ್ತ. ಹೆಂಡತಿ ಮಾರಿ ಮಸಣಿಯ ಭಕ್ತೆ! ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆ–ಮಾಂಸ. ಭಾಂಡಭಾಜನ ಶುದ್ಧವಿಲ್ಲ ದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ, ಕೂಡಲಸಂಗಮದೇವಾ."

"ಪಾಷಂಡಿ ಜನತೆಯಂತೆ ಸೋಮಾರಿಗಳಾಗಬಾರದು. ದುಡಿಯಬೇಕು; ದುಡಿದು ತಿನ್ನಬೇಕು. ಇನ್ನೊಬ್ಬರ ಆಶ್ರ ಯದಲ್ಲಿ, ಹಂಗಿನಲ್ಲಿ ಬದುಕಬಾರದು. ಸತ್ಯಶುದ್ಧನಾಗಿ ದುಡಿದು ಗಳಿಸಬೇಕು. ಇದಕ್ಕೆ ಶರಣರು ಕಾಯಕವೆಂದು ಕರೆದಿದ್ದಾರೆ. ಕಾಯಕ ದೇವರಿಗೆ ಮೆಚ್ಚುಗೆಯಾದುದು. ಈ ಕಾಯಕದಿಂದ ನಮ್ಮ ಮತ್ತು ನಮ್ಮ ಸಮಾಜದ ಅನೇಕ ಅನಿಷ್ಟಗಳು ದೂರಾಗುವುವು. ಪವಿತ್ರಮನಸ್ಸಿನಿಂದ ಕೆಲಸ ಮಾಡಬೇಕು ಎಂಬುದರಿಂದ ಕೆಲಸದಲ್ಲಿ ಆಸಕ್ತಿ, ಪ್ರೀತಿ ಉಂಟಾಗುವುವು. ನಾವು ಮಾಡುವ ಕೆಲಸವನ್ನು ನಾವು ಪ್ರೀತಿಸದಿದ್ದರೆ ಅದು ಯಶಸ್ವಿಯಾಗಲಾರದು. ಈ ಕಾಯಕ ದಲ್ಲಿ ಮೇಲಿಲ್ಲ, ಕೀಳಿಲ್ಲ. ಎಲ್ಲ ಕಾಯಕಗಳೂ ಒಂದೇ. ಸಮ

ಗಾರನಿಂದ ಹಿಡಿದು ವೇದ ಓದುವ ಬ್ರಾಹ್ಮಣನವರೆಗೂ ಎಲ್ಲರೂ ಸಮಾನರೇ. ಎಲ್ಲರೂ ಕಾಯಕವಂತರೇ. ನಮ್ಮಲ್ಲಿ ಯಾವ ಭೇದಭಾವವೂ ಇಲ್ಲ, ಇರಬಾರದು. ನಾನು ಜಂಗಮ ಶಿವಾನುಭವ ಹೇಳುತ್ತೇನೆ ಎಂಬುದರಿಂದ ನಾನು ನಿಮಗಿಂತ ಶ್ರೇಷ್ಠನಲ್ಲ; ನೀವು ಕೀಳಲ್ಲ. ನಾವು ನಮ್ಮ ನಮ್ಮ ಕಾಯಕ ವುಳ್ಳವರಾದುದರಿಂದ ಸಮಾನರು. ಸಮಾನತೆಯನ್ನು ತಂದು ಕೊಳ್ಳಲು ಶರಣರು ನಮಗೆ ಕಾಯಕವೆಂಬ ಒಳ್ಳೆಯ ಸಾಧನ ವನ್ನು ಕೊಟ್ಟಿದ್ದಾರೆ. ಕಾಯಕದಲ್ಲಿ ಇನ್ನೊಂದು ನೆನಪಿಟ್ಟು ಆಚರಿಸುವಂಥ ಮಾತಿದೆ. ದುಡಿದು ಗಳಿಸಿದುದರಲ್ಲಿ ನಮಗೆ ಬೇಕಾದಷ್ಟನ್ನೇ ಇಟ್ಟುಕೊಂಡು ಉಳಿದುದನ್ನು ಗುರು ಲಿಂಗ ಜಂಗಮರಿಗೆ ಕೊಡಬೇಕು, ಇದು ದಾಸೋಹ. ಗುರು ಲಿಂಗ ಜಂಗಮರಿಗೆ ಕೊಡಬೇಕೆಂದರೆ ಅದು ದಾನ ವೆಂದು ತಿಳಿಯಬಾರದು; ಅವರು ಭಿಕ್ಷುಕರಲ್ಲ. ಗುರುವು ಜ್ಞಾನಕೊಡುವನು. ಜಂಗಮ ಮೋಕ್ಷದ ದಾರಿತೋರಿಸು ವನು. ಲಿಂಗ ಸಾಕ್ಷಾತ್ ದೈವ. ಇವರೆಲ್ಲರೂ ತಮ್ಮ ತಮ್ಮ ಕಾಯಕ ಮಾಡುವವರು. ಅವರ ಕಾಯಕಕ್ಕೆ ನಾವು ಪ್ರತಿ ಫಲ ಕೊಡಬೇಕಲ್ಲ, ಆದ್ದರಿಂದ ನಾವು ಅವರಿಗೆ ಕೊಡು ವುದು ಭಿಕ್ಷೆಯಲ್ಲ. ಇಂಥ ಕಾಯಕ ಬಹು ಶ್ರೇಷ್ಠವಾದುದು. ಇದು ಲಿಂಗಪೂಜೆಗೆ ಸಮಾನವಾದುದು. ಇದರಿಂದ ಲಿಂಗಾಂಗ ಸಾಮರಸ್ಯವನ್ನು ಸಾಧಿಸಲು ಸಾಧ್ಯವಿದೆ. ಆದ್ದರಿಂದ ಇದು ಲಿಂಗಪೂಜೆಗಿಂತಲೂ ಶ್ರೇಷ್ಠವಾದುದೆಂದು ಶರಣರು ಹೇಳಿ ದ್ದಾರೆ. ಆಯ್ದಕ್ಕಿ ಮಾರಯ್ಯನ ವಚನವನ್ನು ಕೇಳಿರಿ:

"ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು;
ಲಿಂಗಪೂಜೆಯಾದರೂ ಮರೆಯಬೇಕು;
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು,
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು."

"ಅಮರೇಶ್ವರಲಿಂಗದ ಬದುಕೂ ಕಾಯಕದಿಂದಲೇ. ದೇವರಾದರೂ ಕಾಯಕದಿಂದಲೇ ಬದುಕಬೇಕು; ಒಮ್ಮೆ ಮೇದರ ಕೇತಯ್ಯನ ಮನೆಗೆ ಶಿವನು ಜಂಗಮವೇಷ ಧರಿಸಿ ಬಂದನು. ಕೇತಯ್ಯ ಅವನನ್ನು ಕೂಡ್ರಿಸಿ ಉಣಿಸಲಿಲ್ಲ. ಬಿದಿರುಸೀಳಿ ಬುಟ್ಟಿ ಹೆಣೆಯಲು ಹಚ್ಚಿದ. ಹಾಗೆ ಕಾಯಕ ಮಾಡಿದರೇನೇ ಆವನಿಗೆ ಪ್ರಸಾದ ದೊರಕುತ್ತಿತ್ತು. ಶಿವನಿಗೆ ಈ ಕೆಲಸದಿಂದ ಬೇಸರಬಂತು; ಆವನು ಹೋಗಿಬಿಟ್ಟ. ಇದರಿಂದ ಮೇದರ ಕೇತಯ್ಯ ಅಂಜಲಿಲ್ಲ. ನಕ್ಕು ನುಡಿದ: 'ಕೈಲಾಗದ ಸೋಮಾರಿ ಶಿವ ನಮಗೆ ಬೇಕಾಗಿಲ್ಲ, ದುಡಿಯುವ ಶಿವ ನಮಗೆ ಬೇಕು.'

"ಸುಲಿಯ ಚಂದಯ್ಯನೆಂಬ ಒಬ್ಬ ಶರಣನಿದ್ದ. ಹುಲ್ಲು ಕೊಯ್ದು ಹಗ್ಗ ಹೊಸೆದು ಮಾರುವ ಕಾಯಕ ಆತ ಮಾಡುತ್ತಿದ್ದ. ಆತನ ಕಾಯಕ ನೋಡಿ ಕೊರಳಲ್ಲಿದ್ದ ಲಿಂಗಕ್ಕೆ ಬೇಸರ ಬಂತು. ಆದುದರಿಂದ ಒಂದು ದಿನ ಚಂದಯ್ಯ ಹುಲ್ಲುಕೊಯ್ಯುವಾಗ ಆ ಲಿಂಗ ಕೊರಳಿಂದ ಜಾರಿ ಕೆರೆಯಲ್ಲಿ ಬಿತ್ತು. ಚಂದಯ್ಯನಿಗೆ ಆದರ ಬೇಸರ ಗೊತ್ತಾಯಿತು. ಅದಕ್ಕಾಗಿ ಬಿದ್ದಲಿಂಗವನ್ನು ಅಲ್ಲಿಯೇ ಬಿಟ್ಟುಬಂದ. ಆಗ ಲಿಂಗ ಕೆರೆಯಿಂದ ಎದ್ದು 'ನನ್ನನ್ನು ಕರೆದುಕೋ' ಎಂದು ಚಂದಯ್ಯನ ಹಿಂದೆ ಹಿಂದೆ ಬಂತು. ಕಾಯ



ಕಕ್ಕೆ ಬೇಸರಿಸುವ ಲಿಂಗ ನನಗೆ ಬೇಡವೆಂದ ಚಂದಯ್ಯ.
ಅಲ್ಲಿಯೇ ಬಟ್ಟೆಯೊಗೆಯುತ್ತಿದ್ದ ಮಡಿವಾಳ ಮಾಚರಸರ
ಮಧ್ಯಸ್ತಿಕೆಯಿಂದಲೂ ಅವರ ಜಗಳ ಬಗೆಹರಿಯಲಿಲ್ಲ.
ಅಂದು ಅನುಭವ ಮಂಟಪದಲ್ಲಿ ಈ ಚರ್ಚೆ ಬಂತು. ಲಿಂಗ
ವನ್ನು ಬಿಟ್ಟಿರಬಾರದು, ಅದನ್ನು ಮರಳಿ ಕರೆದುಕೊಳ್ಳ
ಬೇಕು ಎಂದು ಚಂದಯ್ಯನಿಗೆ ಹೇಳಿದರು. ಅದಕ್ಕೆ ಚಂದಯ್ಯ
'ಲಿಂಗವನ್ನು ಮರಳಿ ಕರೆದುಕೊಳ್ಳಲು ನಾನು ಸಿದ್ಧನಿದ್ದೇನೆ.
ಆದರೆ ಒಂದು ಕರಾರು. ಇದು ಕಾಯಕ ಮಾಡಬೇಕು.
ನಾನು ಮಾಡಿದ ಕಣ್ಣಿ ಮತ್ತು ಹಗ್ಗಗಳನ್ನು ಈ ಲಿಂಗ ಮಾರಿ

ಕೊಂಡು ಬರಬೇಕು. ಇದಕ್ಕೊಪ್ಪಿದರೆ ನಾನು ಲಿಂಗವನ್ನು ಮರಳಿ ಕರೆದುಕೊಳ್ಳುವೆನು' ಎಂದ. ಲಿಂಗ ಅವನ ಕರಾರಿಗೆ ಒಪ್ಪಿತು. ಚಂದಯ್ಯ ಅದನ್ನು ಸ್ವೀಕರಿಸಿದ. ಹೀಗೆ ಶರಣರು ಶಿವನನ್ನೂ ದುಡಿಸಿದರು. ಅವರ ದೃಷ್ಟಿಯಲ್ಲಿ ಶಿವನೇನೂ ಹೆಚ್ಚಿನವನಲ್ಲ.

## ಕೈಲಾಸವೆಂಬುದು ಬೇರಿಲ್ಲ

ಕಾಯಕವೇ ಕೈಲಾಸ. ಸಿದ್ಧರಾಮೇಶ್ವರರ ಈ ವಚನ ಕೇಳಿರಿ :

ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ ನೀವು ಕೇಳಿರಯ್ಯಾ,
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ,
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು.
ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ–ಇದರಾಡಂಬರ ವೇಕಯ್ಯಾ ?
ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ, ಲಿಂಗಾಂಗ ಸಾಮರಸ್ಯವ ತಿಳಿದು,
ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ
ಕೈಲಾಸವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ."

ಹೀಗೆ ಸರ್ವಶುದ್ಧ ಕಾಯಕವೇ ಕೈಲಾಸ.

ಇನ್ನು ಸ್ವರ್ಗ ನರಕಗಳೂ ಅಷ್ಟೇ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ಬಸವಣ್ಣನವರು ಹೇಳಿಲ್ಲವೇ ? ಅಣ್ಣನವರ ಈ ವಚನವನ್ನು ಕೇಳಿರಿ :

"ಹೊಯ್ದರೆ ಹೊಯ್ಗಳು ಕಯ್ಯ ಮೇಲೆ!
ಬಯ್ದರೆ ಬಯ್ಗಳು ಕಯ್ಯ ಮೇಲೆ!
ಹಿಂದಣ ಜನನವೇನಾದೊಡಾಗಲಿ–

ಇಂದಿನ ಭೋಗವು ಕಯ್ಯ ಮೇಲೆ,
ಕೂಡಲಸಂಗಮದೇವಯ್ಯಾ
ನಿಮ್ಮ ಪೂಜಿಸಿದ ಫಲ ಕಯ್ಯ ಮೇಲೆ!"

ಈ ರೀತಿಯಾಗಿ ಜನತೆಗೆ ಬೋಧಿಸಿ ಆತ್ಮಶುದ್ಧಿಗೊಳಿಸುವ ಕಾರ್ಯದಲ್ಲಿ ಸ್ವಾಮಿಗಳು ತೊಡಗಬೇಕಾಯಿತು.

ಒಂದು ಹಳ್ಳಿಯಲ್ಲಿ ಒಬ್ಬ ಮಾದಿಗರವನು ಜ್ವರದಿಂದ ಬಳಲುತ್ತಿದ್ದ. ಗಡ್ಡೆತಾತ ಗಡ್ಡೆತಾತ ಎಂದು ಬಡಬಡಿಸುತ್ತಿದ್ದ ಈ ಸುದ್ದಿ ಸ್ವಾಮಿಗಳಿಗೆ ಮುಟ್ಟಿ ಅವರು ನೇರವಾಗಿ ಆ ಭಕ್ತನ ಮನೆಗೆ ಹೋದರು. ಅವನ ಮೈಸವರಿ, ಹಣೆ ಮುಟ್ಟಿದರು. ಆ ಭಕ್ತ ಎದ್ದು ಕುಳಿತ. ಆತನ ಹೃದಯ ತುಂಬಿ ಬಂದಿತು; ಕಂಗಳು ತುಂಬಿಬಂದವು. "ಗುರುವೇ ನನ್ನ ಭವರೋಗ ದೂರಾಯಿತು" ಎಂದ.

ಊರಿನ ಕರ್ಮಠರಿಗೆ ಚೆನ್ನಬಸವಸ್ವಾಮಿಗಳ ಈ ವರ್ತನೆ ಸರಿಬರಲಿಲ್ಲ. ಧರ್ಮ ಕೆಡಿಸುತ್ತಾರೆ ಎಂದರು. ಗಡ್ಡೆತಾತ ಅಂದು ಆ ಊರಿನ ಜನರನ್ನು ಕೂರಿಸಿಕೊಂಡು ಶಿವಾನುಭವ ಹೇಳಿದರು.

"ನನ್ನನ್ನು ಮಾದಿಗರ ಮನೆಗೆ ಹೋಗಿ ಧರ್ಮ ಕೆಡಿಸಿದ ಎನ್ನುತ್ತಾರೆ ಜನ. ಮಾದಿಗರು ಯಾರು? ಹೊಲೆಯರು ಯಾರು? ಎಂಬುದು ಆ ಜನರಿಗೆ ಗೊತ್ತಿಲ್ಲ. ಮಾನವ ಜಾತಿ ತಾನೊಂದೇ. ಇಲ್ಲಿ ಭೇದಭಾವವಿಲ್ಲ. ಸದ್–ಆಚಾರ ಮಾತ್ರ ಮುಖ್ಯ. ಹೊಲಸು ತಿಂಬವನೇ ಹೊಲೆಯ; ಕೊಲ್ಲುವವನೇ ಮಾದಿಗ. ಬೇಡರ ಕಣ್ಣಪ್ಪ ಜಾತಿಯಿಂದ ಬೇಡ. ಆತನ ಕಾಯಕ ಬೇಟೆಯಾಡುವುದು. ಹೀಗಿದ್ದರೂ ಆತನ ನಿರ್ಮಲವಾದ ಭಕ್ತಿಗೆ ಶಿವ ಮೆಚ್ಚಿದ. ಲಿಂಗದ ಮೇಲಿನ ಹೂಗಳನ್ನು ಕೆರವುಗಾಲಿನಿಂದ ಸರಿಸಿ, ಬಾಯಲ್ಲಿಯ ನೀರನ್ನು ಲಿಂಗಕ್ಕೆ



ಎರೆದು, ಕಾಡುಹೂ ಧರಿಸಿ, ಹಸಿಮಾಂಸದ ಎಡೆ ಮಾಡು
ತ್ತಿದ್ದ. ಹೀಗಿದ್ದರೂ ಶಿವನಿಗೆ ಅವನ ಪೂಜೆ ಪ್ರಿಯವಾಗಿತ್ತು.
ಏಕೆಂದರೆ ಅವನಲ್ಲಿ ಭಕ್ತಿಯಿತ್ತು; ಅವನ ಅಂತರಂಗ ಶುದ್ಧ
ವಿತ್ತು. ಆದರೆ ಬಹು ಮೃದುವಾಗಿ, ಘಮಘಮಿಸುವ
ವಸ್ತುಗಳಿಂದ ಪೂಜಿಸುತ್ತಿದ್ದ ಬ್ರಾಹ್ಮಣನ ಪೂಜೆ ಶಿವನಿಗೆ
ಅಪ್ರಿಯವಾಗಿತ್ತು. ಏಕೆಂದರೆ ಆತನಲ್ಲಿ ಭಕ್ತಿಯಿರಲಿಲ್ಲ;
ಆತನ ಅಂತರಂಗ ಶುದ್ಧವಿರಲಿಲ್ಲ. ಶಿವನ ಕಣ್ಣಲ್ಲಿ ನೀರು
ಸೋರಿದಾಗ ಆ ಬ್ರಾಹ್ಮಣ ಶಿವನಿಗೆ ರೋಗ ಬಂದಿದೆ. ಆದರ
ನಿವಾರಣೆಗೆ ಭೂರಿ ಸಮಾರಾಧನೆ ಮಾಡಬೇಕು, ಬ್ರಾಹ್ಮಣರಿಗೆ

ತೃಪ್ತಿ ಯಾಗಬೇಕು ಎಂದು ಹೇಳಿದ. ಶಿವನ ನೋವಿನ ಬಗ್ಗೆ ವಿಚಾರಿಸಲಿಲ್ಲ. ಆದರೆ ಕಣ್ಣಪ್ಪ ಶಿವನಿಗೆ ತನ್ನ ಕಣ್ಣುಗಳನ್ನು ಕಿತ್ತಿಟ್ಟ! ಎಂಥ ತ್ಯಾಗಿ! ಇಲ್ಲಿ ಯಾರ ಕುಲ ಹೆಚ್ಚಿನದು ? ಮಾದಾರ ಚೆನ್ನಯ್ಯ ಜಾತಿಯಲ್ಲಿ ಮಾದಿಗ; ಆದರೆ ಆಚಾರ ದಲ್ಲಿ ಸರ್ವಶ್ರೇಷ್ಠ. ಆತನ ಜೊತೆಗೆ ಶಿವನು ಅಂಬಲಿ ಯನ್ನುಂಡ. ಈ ಸಮಾಚಾರ ತಿಳಿದು ರಾಜರಾಜೇಂದ್ರ ಚೋಳ ಮಾದರಗೇರಿಗೆ ಬಂದ. ಚೆನ್ನಯ್ಯನ ಪಾದಗಳಿಗೆ ತನ್ನ ಮುಡಿಯನ್ನಿಟ್ಟ. 'ದೇವನೊಲಿದವನ ಕುಲವೇ ಸತ್ಕುಲ' ಎಂದು ಹಾಡಿ ಹೊಗಳಿದ. 'ಕುಲವೇನೋ ಆವಂದಿರ ಕುಲವೇನೋ ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು' ಎಂದು ಅಣ್ಣ ಬಸವಣ್ಣನವರು ಹೇಳಿದ್ದಾರೆ."

ಹೀಗೆ ದೃಷ್ಟಾಂತ ಪೂರ್ವಕವಾಗಿ ಜನತೆಗೆ ತಿಳಿಹೇಳಿ ಸರಳವಾದ ರೀತಿಯಲ್ಲಿ ನೀತಿ ಬೋಧೆಯನ್ನು ಮಾಡು ತ್ತಿದ್ದರು.

ಇನ್ನೊಂದು ಹಳ್ಳಿಯಲ್ಲಿ ಜನ ಜ್ಯೋತಿಷ್ಯಕ್ಕೆ ಬಹಳ ಮಹತ್ವ ಕೊಡುತ್ತಿದ್ದರು. ಬೇನೆ ಬೇಸರಿಕೆ ಬಂದಾಗಲೂ ಜನ ವೈದ್ಯರ ಹತ್ತಿರ ಸುಳಿಯುತ್ತಿರಲಿಲ್ಲ; ಜ್ಯೋತಿಷಿಗಳ ಹತ್ತಿರ ಹೋಗಿ ಮೋರೆ ಮಂತ್ರಿಸಿಕೊಂಡು, ಯಂತ್ರ ಕಟ್ಟಿಸಿ ಕೊಳ್ಳುತ್ತಿದ್ದರು. ಮರದ ಪೂಜೆ, ಕಲ್ಲಿನ ಪೂಜೆ ಸಾಮಾನ್ಯ ವಾಗಿತ್ತು. ಎಲ್ಲಕ್ಕೂ ಗ್ರಹಗಳ ಕಾಟವೆಂದೇ ಅವರು ನಂಬಿ ದ್ದರು. ಜ್ಯೋತಿಷಿಗಳು ಯಂತ್ರ ಮಂತ್ರ ಮಾಡುವುದರಿಂದ ಜನರ ಶೋಷಣೆ ನಿರಂತರವಾಗಿ ನಡೆಯುತ್ತಿತ್ತು. ಈ ಜನರ ಉದ್ಧಾರಕ್ಕೆ ಗಡ್ಡೆತಾತ ಪ್ರಯತ್ನ ನಡೆಸಿದರು. ಜ್ಯೋತಿ ಷ್ಯಕ್ಕೆ, ಯಂತ್ರಮಂತ್ರಕ್ಕೆ ಜನ ಒಲಿದುದರ ಮೂಲ, ಅಂಜಿಕೆ

ಎಂದು ತಾತನವರಿಗೆ ಗೊತ್ತಾಯಿತು. ಆದುದರಿಂದ ಅವರ ಹೆದರಿಕೆಯನ್ನು ಮೊದಲು ಕಳೆದರು. ತಾತನವರ ಬೋಧೆ ಹೀಗಿತ್ತು:

"ಬರುವ ಕಷ್ಟಗಳು ಅನಿಷ್ಟಗಳು ಬಂದೇ ಬರುತ್ತವೆ; ಅವುಗಳನ್ನು ತಡೆಯುವುದು ಸಾಧ್ಯವಿಲ್ಲ; ಜೀವನದಲ್ಲಿ ಅವು ಸಹಜ. ಜ್ಯೋತಿಷಿ ಹೇಳುವ ಯಾವ ಶಾಂತಿ ಮಾಡುವುದ ರಿಂದಲೂ, ಯಾವ ಯಂತ್ರ ಮಂತ್ರಗಳಿಂದಲೂ ಅವು ದೂರಾ ಗವು. ಅವುಗಳನ್ನು ಧೈರ್ಯವಾಗಿ ಎದುರಿಸಬೇಕು. ಶಿವ ಮಂತ್ರ ಉಚ್ಚಾರಣೆಯಿಂದ ಧೈರ್ಯ ಬರುವುದು. ಮನುಷ್ಯ ಎದೆಗಾರನಾಗಬೇಕು; ಎದೆಗಾರನಿಗೆ ಬರುವ ಅನಿಷ್ಟ, ಕಷ್ಟ ಗಳೆಲ್ಲ ಮಂಜಿನಂತೆ ಕರಗಿ ಹೋಗುವುವು. ಹೇಡಿಯಾದ ವನಿಗೆ ಇಲ್ಲದ ಅನಿಷ್ಟ ಆಪತ್ತುಗಳು ಬಂದು ಆಕ್ರಮಿಸು ವುವು. ಅಣ್ಣನವರ ಈ ವಚನವನ್ನು ಕೇಳಿರಿ:

"ನಾಳೆ ಬಪ್ಪುದು ನಮಗಿಂದೇ ಬರಲಿ;
ಇಂದು ಬಪ್ಪುದು ನಮಗೀಗಲೆ ಬರಲಿ;
ಇದಕಾರಂಜುವರು, ಇದಕಾರಳುಕುವರು ?
"ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ
ನಮ್ಮ ಕೂಡಲಸಂಗಮದೇವರು ಬರೆದ ಬರೆಹ ತಪ್ಪಿಸುವರೆ
ಹರಿಬ್ರಹ್ಮಾದಿಗಳಿಗಳವಲ್ಲಾ !"

"ಹುಟ್ಟಿದವನಿಗೆ ಮರಣ ತಪ್ಪಿದ್ದಲ್ಲ. ದೇವರ ಬರೆಹ ಅಳಿಸಲು ಸಾಧ್ಯವಿಲ್ಲ. ಅಂದಮೇಲೆ ಬೇರೆ ವಿಚಾರವೇಕೆ ? ಹೇಡಿಯಾದವನಿಗಾಗಿ ಈ ಜಗತ್ತು ಇಲ್ಲ. ಧೈರ್ಯದಿಂದ ಮುನ್ನುಗ್ಗುವವನಿಗೆ ಯಶಸ್ಸು ಕಟ್ಟಿಟ್ಟದ್ದು. 'ಕರ್ಮಫಲ ಗೂಡಿ ಕೂಡಲಸಂಗಮದೇವಂಗೆ ಆತ್ಮಸಮರ್ಪಣ' ಮಾಡ

ಬೇಕೆಂದು ಬಸವಣ್ಣನವರು ಹೇಳುತ್ತಾರೆ. ಮರಣವೇ ಮಹಾನವಮಿ ವೀರನಾದವನಿಗೆ.

ಯಾವ ಕಾಲಕ್ಕೂ ಯಾವ ಕೆಲಸಕ್ಕೂ ಜ್ಯೋತಿಷ್ಯ ಕೇಳಬೇಕಾಗಿಲ್ಲ. ಲಗ್ನ, ಗಣ, ಕೂಟ, ರಾಶಿ, ವಾರ, ನಕ್ಷತ್ರ ನೋಡಬೇಕಾಗಿಲ್ಲ. ಶಿವನನ್ನು ನಂಬಿದವನಿಗೆ ಲಗ್ನವಿಲ್ಲ, ವಿಘ್ನವಿಲ್ಲ. 'ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ ಸಂಗಯ್ಯಾ? ದೋಷವೆಲ್ಲಿಯದೋ, ದುರಿತವೆಲ್ಲಿಯದೋ ಸಂಗಯ್ಯಾ? ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿ ಯದೋ ಕೂಡಲಸಂಗಮದೇವಾ ?' 'ಶುಭಾಶುಭ ಶಿವಾ ರ್ಪಣವೆಂದು ನಂಬು' ಎಂದು ಸಿದ್ಧರಾಮೇಶ್ವರರು ಹೇಳು ತ್ತಾರೆ. ಕಾರ್ಯ ಹಮ್ಮಿಕೊಳ್ಳುವ ಕಾಲಕ್ಕೆ ಅಂದು ಇಂದು ಎನಬಾರದು; ಸಂಶಯ ತಾಳಬಾರದು. ನಿಶ್ಚಲ ಮನಸ್ಸಿನಿಂದ ಮುಂದುವರಿಯಬೇಕು. 'ಅಂದು ಇಂದು ಮತ್ತೊಂದು ಎನ ಬೇಡ, ದಿನ ಒಂದೇ ಶಿವಶರಣೆಂಬುವಂಗೆ. ದಿನ ಒಂದೇ ಹರಶರಣೆಂಬುವಂಗೆ. ದಿನ ಒಂದೇ ನಮ್ಮ ಕೂಡಲಸಂಗನ ಮಾಣದೆ ನೆನೆಯುವಂಗೆ.'

"ನಾಡಿನಲ್ಲಿ ಕೆಲವರು ದೇಹದ ಬಗ್ಗೆ ಬಹಳ ಅಲಕ್ಷ್ಯ ವುಳ್ಳವರಾಗಿದ್ದರು. ಈ ದೇಹ ಹೇಗಿದ್ದರೇನು ಎಂಬುದು ಅವರ ಭಾವನೆಯಾಗಿತ್ತು. ಬಹಿರಂಗದ ಶುದ್ಧಿಯ ಕಡೆಗೆ ಅವರ ಲಕ್ಷ್ಯವೇ ಇರಲಿಲ್ಲ. ಅಲ್ಲದೆ ಇನ್ನು ಕೆಲವರು ಸಲ್ಲದ ವ್ರತ ನೇಮಗಳಿಂದ ದೇಹವನ್ನು ದಂಡಿಸುತ್ತಿದ್ದರು. ಜೀವನ ಪರಿಶುದ್ಧವಾಗಲಿಕ್ಕೆ, ಜೀವನ್ಮುಕ್ತಿ ದೊರೆಯಲಿಕ್ಕೆ ದೇಹ ದಂಡನೆ ಮಾಡಬಾರದು, ಈ ಶರೀರವನ್ನು ಕೆಡಿಸಬಾರದು. ಈ ದೇಹ ಅನಿಷ್ಟ, ಅನಿತ್ಯ ಎಂದು ತಿಳಿದು ಅದರ ಬಗ್ಗೆ

ಅಲಕ್ಷ್ಯ ಮಾಡುವುದು ಅಪರಾಧ; ಅದನ್ನು ಲಿಂಗದಂತೆ ಜೋಪಾನ ಮಾಡಬೇಕು. ಈ ದೇಹದಿಂದಲೇ ನಾವು ಸರ್ವಸ್ವವನ್ನು ಸಾಧಿಸಬೇಕಾಗಿದೆ. 'ಕೂಡಲಚೆನ್ನಸಂಗಮ ದೇವಾ, ಈ ದೇಹದಿಂದ ನಿಮ್ಮುವ ಕಂಡೆನು' ಎಂದು ಚೆನ್ನ ಬಸವಣ್ಣನವರು ಹೇಳುತ್ತಾರೆ. ನಮ್ಮ ಮೋಕ್ಷಕ್ಕೆ, ಸಾಕ್ಷಾತ್ಕಾರಕ್ಕೆ, ಸಂಸಾರದ ಸುಖಗಳಿಗೆ ಎಲ್ಲಕ್ಕೂ ಈ ದೇಹವೇ ಕಾರಣವಾಗಿದೆ. 'ಈ ದೇಹ ಆತ್ಮನ ಕಟ್ಟುವ ಗೊತ್ತು' ಎಂದು ಮೆರೆಮಿಂಡ ದೇವರು ಹೇಳಿದ್ದಾರೆ. 'ಕೂಡಲ ಸಂಗಮದೇವರನ್ನು ಒಲಿಸ ಬಂದ ಪ್ರಸಾದ ಕಾಯುವ ಕೆಡಿಸ ಬಾರದು'–ಎಂದು ಬಸವಣ್ಣನವರು ನುಡಿದಿದ್ದಾರೆ.

"ಈ ದೇಹವನ್ನು ಶುದ್ಧವಾಗಿಟ್ಟುಕೊಳ್ಳುವುದೆಂದರೆ ಪಂಚೇಂದ್ರಿಯಗಳನ್ನು ಶುದ್ಧವಾಗಿಟ್ಟುಕೊಳ್ಳಬೇಕು ಎಂದರ್ಥ. ಒಳ್ಳೆಯದನ್ನೇ ಕೇಳಬೇಕು, ಒಳ್ಳೆಯದನ್ನೇ ನೋಡಬೇಕು, ಒಳ್ಳೆಯದನ್ನೇ ನುಡಿಯಬೇಕು, ಒಳ್ಳೆಯದನ್ನೇ ಮೂಸಬೇಕು, ಕಂಗಳಲ್ಲಿ ಸೋತರೂ ವ್ಯಭಿಚಾರವಾಗುತ್ತದೆ ಎನ್ನುತ್ತಾರೆ ಬಸವಣ್ಣನವರು. ಅಲ್ಲಮಪ್ರಭುಗಳಿಗೆ ಮೂಗಿಲ್ಲದವ ಎನ್ನುತ್ತಾರೆ. ಮೂಗು–ವಿಷಯ, ಮೋಹ, ವ್ಯಾಮೋಹದ ಸಂಕೇತ. ಈ ವಿಷಯವನ್ನು ಗೆದ್ದರೆ ನಾವೂ ಮೂಗಿಲ್ಲದವರಾಗುತ್ತೇವೆ. ನಾಲಿಗೆಯ ಬಗ್ಗೆಯಂತೂ ಬಹಳ ಎಚ್ಚರವಹಿಸಬೇಕು. 'ಕುಲವ ನಾಲಿಗೆ ಅರುಹಿತು' ಎಂಬ ಮಾತು ಸುಳ್ಳಲ್ಲ. ನುಡಿ ಚೆನ್ನಾಗಿರಬೇಕು. ಅದು ದೇವರ ಒಲುಮೆಗೆ ಸಾಧನ. ಬಸವಣ್ಣನವರ ಈ ವಚನ ಕೇಳಿರಿ :

> ನುಡಿದರೆ ಮುತ್ತಿನ ಹಾರದಂತಿರಬೇಕು
> ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು

ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದಿರೆ ಲಿಂಗಮೆಚ್ಚಿ 'ಅಹುದಹುದೆ'ನ ಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯಾ?

ಅಲ್ಲಮ ಪ್ರಭುಗಳು 'ಮಾತೇ ಜ್ಯೋತಿರ್ಲಿಂಗ' ಎಂದು ಹೇಳಿದ್ದಾರೆ. ಮಾತಿಗೆ ಇಷ್ಟು ಬೆಲೆಯಿರುವಾಗ ಅದನ್ನು ನಾವು ಎಷ್ಟು ಎಚ್ಚರ ವಹಿಸಿ ಆಡಿದರೂ ಕಡಿಮೆ.

ಪುಣ್ಯ ಪಾಪಕ್ಕೆ ಮೂಲ ನಮ್ಮ ನಾಲಗೆಯೇ! 'ಪುಣ್ಯ ಪಾಪವೆಂಬುವು ತಮ್ಮಿಷ್ಟ ಕಂಡಿರೇ; ಅಯ್ಯಾ, ಎಂದಡೆ ಸ್ವರ್ಗ; ಎಲವೊ ಎಂದಡೆ ನರಕ! ದೇವಾ, ಭಕ್ತ ಜಯಾ ಜೀಯಾ ಎಂಬ ನುಡಿಯೊಳಗೆ ಕೈಲಾಸವಿದ್ದುದೊ ಕೂಡಲ ಸಂಗಮದೇವಾ.'

ಹೀಗೆ ಯಾವ ತಾತ್ವಿಕ ವಿಚಾರದ ಬಗೆಗಾಗಲೀ ಶರಣರ ವಚನಗಳ ಆಧಾರದಿಂದ ಸಾಧಾರಪೂರ್ವಕವಾಗಿ ವಿವರಿಸು ತ್ತಿದ್ದರು. ಜನತೆಗೆ ಮನದಟ್ಟು ಮಾಡಿಕೊಟ್ಟು ನಂತರ ತಿಳಿಯ ಹೇಳುತ್ತಿದ್ದರು.

ಸಂಚಾರ ಕಾಲದಲ್ಲಿ ಅನೇಕ ಕಡೆ ಅನೇಕ ಸಮಸ್ಯೆಗಳು ಚೆನ್ನಬಸವಸ್ವಾಮಿಗಳಿಗೆ ಎದುರಾಗುತ್ತಿದ್ದುವು. ತಮ್ಮ ಅನು ಮಾನಗಳನ್ನು ಸಂಶಯಗಳನ್ನು ಜನರು ಅವರೆದುರಿಗಿಡು ತ್ತಿದ್ದರು. ಸ್ವಾಮಿಗಳು ಅವರ ಸಂಶಯಗಳನ್ನು ತಿಳಿಮಾತು ಗಳಿಂದ, ಶರಣರ ವಚನಗಳಿಂದ ಪರಿಹರಿಸುತ್ತಿದ್ದರು.

ಒಂದೂರಿನಲ್ಲಿ 'ಭಕ್ತ – ಭವಿ' ಯಾರೆಂಬ ಪ್ರಶ್ನೆ ಎದ್ದಿತು. ಸಾಮಾನ್ಯವಾಗಿ ಲಿಂಗ ಧರಿಸಿದವರೆಲ್ಲರೂ ಭಕ್ತರು, ಲಿಂಗ ಧರಿಸದವರು ಭವಿಗಳು ಎಂಬ ತಿಳಿವಳಿಕೆ ಎಂದಿ ನಿಂದಲೂ ಇದ್ದುದೆ. ಈ ಕಲ್ಪನೆ, ಈ ತಿಳುವಳಿಕೆ ತಪ್ಪೆಂದು

ಚೆನ್ನಬಸವ ಸ್ವಾಮಿಗಳು ಹೇಳುತ್ತಿದ್ದರು. ಅವರ ಉಪದೇಶ ಇದು: "ಲಿಂಗಧಾರಿಯಾಗಿ, ಜ್ಞಾನ ಸಂಪಾದಿಸಿ, ಸದಾಶೀಲ ನಾಗಿ ಕಾಯಕವಮಾಡುತ್ತ ಈ ಜನ್ಮವನ್ನು ಕೊನೆಮಾಡಿ ಕೊಳ್ಳುವವನೇ ಭಕ್ತ; ಮತ್ತೆ ಮತ್ತೆ ಹುಟ್ಟಿ ಈ ಜನ್ಮದಲ್ಲಿ ತೊಳಲುವವನೇ ಭವಿ. ಭಕ್ತನ ವಿಶ್ವಾಸವನ್ನು, ಆತನ ನಿಲುಮೆಯನ್ನು ಬಸವಣ್ಣನವರ ಈ ವಚನದಲ್ಲಿ ಕಾಣ ಬಹುದು. 'ಅರಿಯದೆ ಜನನಿಯ ಜಠರದಲ್ಲಿ ಬಾರದ ಭವಂ ಗಳಲ್ಲಿ ಬರಿಸಿದೆ, ತಂದೆ! ಹುಟ್ಟಿತ್ತೇ ತಪ್ಪಾಯಿತ್ತೇ ಎಲೆ ಲಿಂಗವೆ? ಮುನ್ನ ಹುಟ್ಟಿದುದಕ್ಕೆ ಕೃಪೆಮಾಡು ಲಿಂಗವೇ ? ಇನ್ನೂ ಹುಟ್ಟಿದೆನಾದೊಡೆ, ಕೂಡಲಸಂಗಮದೇವಾ ನಿಮ್ಮಾಣೆ.'

"ಲಿಂಗಧಾರಿಯಾಗಿದ್ದರೂ ಸತ್ಕ್ರಿಯೆ ಸದಾಚಾರ ಇಲ್ಲ ದಿದ್ದರೆ ಖಂಡಿತ ಭವಿ ಎನಿಸಿಕೊಳ್ಳುವನು. 'ಭವಿ ಎಂದರೆ ಲಿಂಗವಿಲ್ಲದವ ಭವಿಯೇ? ಅಲ್ಲಲ್ಲ. ಭವಿ ಎಂದರೆ ವೇದ ವೇದಾಂತವನೋದಿ ಲಿಂಗವ ಧರಿಸಿದವ ಭವಿಯೇ? ಅಲ್ಲಲ್ಲ ............ ಭವಿ ಎಂದರೆ ಮದ್ಯಪಾನ, ಮಾಂಸಭಕ್ಷಣ, ಪರ ಸ್ತ್ರೀಸಂಗ, ಪರಧನಚೋರತ್ವ, ನಿಜವಸ್ತು ಅಂತರತ್ವವಿದ್ದ ವನೇ ಭವಿಯಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ."

ಇನ್ನೊಂದು ಊರಿನಲ್ಲಿ "ಭಕ್ತಿ" ಎಂದರೇನೆಂದು ಕೇಳಿ ದರು. ಥಟ್ಟನೆ ಸ್ವಾಮಿಗಳು ಭಕ್ತಿ ಎಂದರೆ ಶರಣರ ದೃಷ್ಟಿ ಯಲ್ಲಿ ದುಡಿಮೆ ಎಂದರು. "ಭಕ್ತಿ ಎಂದರೆ ನಿಷ್ಠೆ, ಪ್ರೇಮ ಎಂಬರ್ಥವಿದ್ದುದು ನಿಜ. ಆದರೆ ಶರಣರು ಕಾಯಕಕ್ಕೇನೇ ಭಕ್ತಿ ಎಂದು ಕರೆದಿರುವ ಮಾತೂ ಸತ್ಯ. 'ಮಾತಿನ ಮಾತಿ ನಲ್ಲಿಪ್ಪುದೆ ಭಕ್ತಿ ಮಾಡಿ ತನು ಸವೆಯದನ್ನಕ್ಕ ಮನ ಸವೆ ಸವೆಯದನ್ನಕ್ಕ ?' ಎನ್ನುತ್ತಾರೆ ಬಸವಣ್ಣನವರು. ಮಾತಿನ

ಮಾತು ಎಂದರೆ ವೇದ ಎಂದರ್ಥ; ಬರಿಯ ಮಾತೂ ಎಂದರ್ಥ. ಬರಿಯ ಮಾತಿನಲ್ಲಿ ಭಕ್ತಿ ಇಲ್ಲ; ಭಕ್ತಿ ಮಾಡಿ ತನುಮನ ಸವೆದರೆ ಭಕ್ತಿ ಅಳವಡುವುದು. ಇನ್ನೊಂದು ವಚನದಲ್ಲಿ ಬಸವಣ್ಣನವರು ಹೀಗೆ ಹೇಳಿದ್ದಾರೆ. 'ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು, ಹಾಸಿ ದುಡಿದರೆ ತನ ಗುಂಟು ತನ್ನ ಪ್ರಮಥರಿಗುಂಟು.' ಇಲ್ಲಿಯೂ ಕಾಯಕ ಮಾಡುವುದೇ ಭಕ್ತಿ ಎಂಬ ಅರ್ಥವಿದೆ. "ವಂಚನೆಯಿಲ್ಲ ದಿಪ್ಪುದೇ ಭಕ್ತಿ' ಎಂದು ಬಸವಣ್ಣನವರು ಮತ್ತೊಂದು ಕಡೆ ಹೇಳಿದ್ದಾರೆ. ಇಲ್ಲಿಯ ಮಾತಿನಿಂದ ಭಕ್ತಿಯಲ್ಲಿ ದಾಸೋ ಹವೂ ಸೇರಿದೆ ಎಂದು ಸ್ಪಷ್ಟವಾಗಿ ಅರ್ಥವಾಗುತ್ತದೆ. ಬಸ ವಣ್ಣನವರು ತಮ್ಮ ಮತ್ತೊಂದು ವಚನದಲ್ಲಿ 'ಹರಿವ ನದಿಯ ತೆರನ ಹೋಲಬಲ್ಲರೆ ಭಕ್ತಿ' ಎಂದಿದ್ದಾರೆ. ಎಂದರೆ ಭಕ್ತಿಯು ಹರಿಯುವ ನದಿಯಂತೆ ಇರಬೇಕು. ಹರಿಯುವ ನದಿಯಿಂದ ನಾನಾ ರೀತಿಯ ಪ್ರಯೋಜನಗಳುಂಟು. ಕುಡಿಯುವ ನೀರು, ಬೆಳೆಗಳಿಗೆ ನೀರು, ಬಟ್ಟೆ ಒಗೆಯಲು ನೀರು, ಪಶುಪಕ್ಷಿಗಳಿಗೆ ನೀರು — ಹೀಗೆ ಹರಿಯುವ ನದಿಯಿಂದ ಅನೇಕ ಬಗೆಯ ಲಾಭಗಳು. ಭಕ್ತನ ಭಕ್ತಿ ಹೊಳೆಯಂತೆ ಪ್ರಯೋಜನಕಾರಿ ಯಾಗಿರಬೇಕು."

ತಾಮಸ ವ್ರತಗಳು ಶೀಲಗಳು ನೇಮಗಳು ಜನರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ಅವು ಕೇವಲ ಬಾಹ್ಯಾ ಡಂಬರ, ಬಾಹ್ಯಾಚರಣೆಗೆ ಸಂಬಂಧಪಟ್ಟಿದ್ದವು. ಅವುಗಳಲ್ಲಿ ಕೆಲವು ಉಗ್ರವಾಗಿದ್ದುವು. ಇವು ಯಾವೂ ಭಕ್ತಿಗೆ ಸಾಧನ ವಾಗಲಾರದೆಂದು ಚೆನ್ನಬಸವ ಸ್ವಾಮಿಗಳು ಬೋಧಿಸು ತ್ತಿದ್ದರು.

"ಶೀಲವೆಂದರೆ ಮುಟ್ಟುವುದು ತಟ್ಟುವುದು ಅಲ್ಲ. ಶೀಲವೆಂದರೆ ಸದಾಚಾರ. ಸದಾಚಾರ ಇಲ್ಲದೆ ಯಾವ ಶೀಲ ಮಾಡಿದರೂ ಪ್ರಯೋಜನವಿಲ್ಲ. 'ಶೀಲಶೀಲವೆಂದೊಡೇನು ? ಭವಿ ನೋಡಿದ ಮಡಕೆಯನು ಕಳೆವುದು ಶೀಲವೇ ? ಕೆರೆ ಬಾವಿಯು ಕಳೆವುದು ಶೀಲವೇ?' ಅಲ್ಲ. 'ಶೀಲವಂತನಾದೊಡೆ ಪ್ರಪಂಚ ನಾಸ್ತಿಯಾಗಿರಬೇಕು' ಎನ್ನುತ್ತಾರೆ ಚೆನ್ನಬಸವಣ್ಣನವರು. ಮತ್ತೊಂದು ಕಡೆ ಚೆನ್ನಬಸವಣ್ಣನವರು 'ಅಶನ ವರತು, ವ್ಯಸನ ಬೆಂದು, ಹುಸಿ ಮಸಣಿಸಿ, ಮಹಾಲಿಂಗದ ವಿಷಯದೊಳಗೆ ತಲ್ಲೀನವಾಗಿ, ಸರ್ವಾಂಗವು ಸಮತೆಯಾಗಿರಬಲ್ಲಡೆ, ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಅವರಚ್ಚ ಶಿಲುವಂತರೆಂಬೆನು. ಅವರೊಕ್ಕುದ ಕೊಂಡು ಸುಖಿಯಾಗಿಪ್ಪೆನಯ್ಯಾ ಎಂದಿದ್ದಾರೆ.

"ಶಿವಶರಣೆ ಆಕ್ಕಮ್ಮ ಆಚಾರವೇ ವ್ರತ ಎನ್ನುತ್ತಾಳೆ. ತನ್ನ ಒಂದು ವಚನದಲ್ಲಿ ಆಕ್ಕಮ್ಮ ಹೀಗೆ ಹೇಳುತ್ತಾಳೆ: 'ವ್ರತವಾವುವೆಂದೆಡೆ: ಪರಾಪೇಕ್ಷೆಯ ಮರೆದು, ಪರಸತಿಯ ತೊರೆದು, ಗುರುಲಿಂಗಜಂಗಮದಲ್ಲಿ ತಾನು ನಿರೋಧಮಂ ತಾಳದೆ, ಹೆಣ್ಣು ಹೊನ್ನು ಮಣ್ಣಿಗಾಗಿ ತಪ್ಪಿ ನುಡಿಯದೆ.... ತಾಮರೆದುದ ಅರಿದು ಎಚ್ಚತ್ತು ನೋಡಿ, ಅಹುದಾದುದ ಹಿಡಿದು, ಅಲ್ಲದುದ ಬಿಟ್ಟು, ಬಹು ದುಃಖಮಂ ಮರೆದು....'

"ನೇಮಗಳು ಬಹಳಷ್ಟು ಕೆಲಸಕ್ಕೆ ಬಾರದವು ಇವೆ. ಹಾಲು, ಮೊಸರು, ತುಪ್ಪ, ಕೆನೆ ಇನ್ನು ಏನೇನೋ ನೇಮಗಳನ್ನು ಹಿಡಿದವರು ಉಂಟು. ಆ ನೇಮಗಳಿಂದ ಆತ್ಮಶುದ್ಧಿಯಾಗುವುದಿಲ್ಲ. ಇಂಥವರನ್ನು ಕಂಡು ಪ್ರಭುದೇವರು ಈ ವಚನದಲ್ಲಿ ವಿಡಂಬನೆ ಮಾಡಿದ್ದಾರೆ:

"ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ.
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ.
ಅಗ್ಘವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ.
ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ.
ಇವು ಷಟ್‌ಸ್ಥಲಕ್ಕೆ ಹೊರಗು.
ಭಕ್ತಿ ನಿಷ್ಠೆ ಇಲ್ಲದವರ ಕಂಡಡೆ ಮೆಚ್ಚ ಗುಹೇಶ್ವರ."

ನಿಜವಾದ ನೇಮ ಏನೆಂಬುದನ್ನು ಬಸವಣ್ಣನವರು ತಮ್ಮ ಈ ವಚನದಲ್ಲಿ ಹೇಳಿದ್ದಾರೆ:

"ಬಂದುದ ಕೈಕೊಳ್ಳಬಲ್ಲರೆ ನೇಮ,
ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ;
ನಡೆದು ತಪ್ಪದಿದ್ದರೆ ನೇಮ, ನುಡಿದು ಹುಸಿಯದಿದ್ದರೆ ನೇಮ.
ನಮ್ಮ ಕೂಡಲಸಂಗನ ಶರಣರು ಬಂದರೆ
ಒಡೆಯರೆಂಗೊಡವೆಯನೊಪ್ಪಿಸುವುದೇ ನೇಮ."

ಚೆನ್ನಬಸವ ಸ್ವಾಮಿಗಳು ಎಲ್ಲಿ ಹೋದರೂ ಜನರಿಗೆ ಕೆಲವು ಮಾತುಗಳನ್ನು ಹೇಳದೆ ಇರುತ್ತಿರಲಿಲ್ಲ. ಆ ಮಾತುಗಳು ಸರ್ವರಿಗೂ ಸರ್ವಕಾಲಕ್ಕೂ ಅನ್ವಯಿಸುವಂಥವಾಗಿವೆ.

"ನೀವು ಯಾರೇ ಆಗಿರಿ, ಯಾವ ಧರ್ಮದವರೇ ಆಗಿರಿ, ಎಲ್ಲಿಯೇ ಇರಿ, ಒಳ್ಳೆಯವರಾಗಿರಿ; ನೀತಿವಂತರಾಗಿರಿ. ಸರ್ವ ಸಾಮಾನ್ಯ ನೀತಿ ಪಾಲಿಸಿದರೂ ದೇವರು ಮೆಚ್ಚುವನು. ಬೆಟ್ಟಕ್ಕೋ ಅಡವಿಗೋ ಹೋಗಿ ತಪಸ್ಸು ಮಾಡುವುದು ಬೇಡ; ತಾಸು ತಾಸು ಶಿವಪೂಜೆ ಮಾಡುವುದೂ ಬೇಡ; ವ್ರತ ನೇಮಗಳೂ ಬೇಡ; ತೀರ್ಥಯಾತ್ರೆಯೂ ಬೇಡ. ಏನೂ ಬೇಡ, ಶುದ್ಧರಾಗಿರಿ, ಸದಾಚಾರಿಗಳಾಗಿರಿ; ಮೋಕ್ಷದ ದಾರಿ ಸುಲಭವಾಗುತ್ತದೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ;
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ!"

ಈ ವಚನದಂತೆ ನಡೆದರೆ ಸಾಕು; ಮತ್ತೆ ಏನೂ ಬೇಡ. ಈ ನಡೆಯಿಲ್ಲದೆ ಏನು ಮಾಡಿದರೂ ವ್ಯರ್ಥ; ಪೂಜೆ ಮಾಡಿದರೂ ವ್ಯರ್ಥ; ಜಪತಪ ಮಾಡಿದರೂ ವ್ಯರ್ಥ; ಯಾವ ಲಾಂಛನ ಧರಿಸಿದರೂ ವ್ಯರ್ಥ; ಅದು ಹೆಂಡದ ಮಡಿಕೆಯನ್ನು ಹೊರಗೆ ತೊಳೆದು ಸಿಂಗರಿಸಿದಂತೆ ಆಗುತ್ತದೆ."

## ಪವಾಡಗಳು

ವೈರಾಗ್ಯನಿಧಿ ಚೆನ್ನಬಸವ ಸ್ವಾಮಿಗಳು ಕೆಲವು ಪವಾಡಗಳನ್ನು ಮೆರೆದಿದ್ದಾರೆ. ಮಹಾತ್ಮರಿಂದ ಪವಾಡಗಳು ಜರುಗುತ್ತವೆ ಎಂದು ಬಹು ಪುರಾತನ ಕಾಲದಿಂದ ಬಂದ ನಂಬುಗೆಯಾಗಿದೆ. ಮಹಾಪುರುಷರು ಪವಾಡಗಳನ್ನು ತಾವಾಗಿಯೇ ಮಾಡಲು ಹೋಗುವುದಿಲ್ಲ; ಅವು ತಾವಾಗಿಯೇ ಜರುಗುತ್ತವೆ ಎಂದು ಬಲ್ಲವರು ಹೇಳುತ್ತಾರೆ. ಆದರೆ ಮಹಾಪುರುಷರು ಅವುಗಳಿಂದಲೇ ದೊಡ್ಡವರಾಗುವುದಿಲ್ಲ. ನಾರದಗಡ್ಡೆ ಚೆನ್ನಬಸವ ಸ್ವಾಮಿಗಳು ಈ ನಾಡಿನ ಜನರ ಜೀವನ ಹಸನು ಮಾಡುವ, ಈ ನಾಡಿನ ಜನರ ಹೃದಯಗಳಲ್ಲಿ ಶಿವನನ್ನು ನೆಲೆಸುವ ಮಹಾಕಾರ್ಯ ಮಾಡಿದರು. ಸಾವಿರಗಟ್ಟಲೆ ಜನ ಅವರಿಂದ ಉದ್ಧಾರವಾದರು. ಇದಕ್ಕಿಂತ ಹೆಚ್ಚಿನ ಪವಾಡವೇನಿದೆ?

ಕಂಬಾಳದಿನ್ನಿಯ ಒಬ್ಬ ಕುರುಡನಿಗೆ ಸ್ವಾಮಿಗಳು ಕಣ್ಣು ಕೊಟ್ಟರಂತೆ. ಆತನ ಹೆಸರು ಕಂಗಾಳಯ್ಯ ಎಂದಾಯಿತಂತೆ. ತುಂಬಿ ಹರಿಯುವ ನದಿಯ ಮೇಲೆ ಕಂಬಳಿ ಹಾಸಿ

ಆದರ ಮೇಲೆ ಕುಳಿತು ದಾಟಿದರಂತೆ. ಉಪ್ಪು ನೀರನ್ನು ಸಿಹಿ ನೀರನ್ನಾಗಿ ಮಾಡಿದರಂತೆ. ಸತ್ತ ಎತ್ತನ್ನು ಬದುಕಿಸಿದರಂತೆ. ಹನುಮಂತ ದೇವರಿಂದ ಸೇವೆ ಮಾಡಿಸಿಕೊಂಡರಂತೆ. ಇವು ಅವರ ಕೆಲವು ಪವಾಡಗಳು. ಇವು ಆಗಿದ್ದರೂ ಅಷ್ಟೇ, ಆಗಿರ ದಿದ್ದರೂ ಅಷ್ಟೇ. ಇವುಗಳಿಂದ ಅವರನ್ನು ಅಳೆಯಲಾಗುವು ದಿಲ್ಲ. ನಾಡಿನ ಜನರನ್ನು ಸರ್ವರೀತಿಯಿಂದ ಉದ್ಧರಿಸಿದ್ದು ಅವರ ಮಹಾಪವಾಡ.

## ಐಕ್ಯ

ವೈರಾಗ್ಯನಿಧಿ ಶಿವಾನುಭವ ಚರಚಕ್ರವರ್ತಿ ಚೆನ್ನಬಸವ ಸ್ವಾಮಿಗಳು ಐವತ್ತು ವರ್ಷ ಸತತ ಜನರಿಗೆ ಬೋಧೆ ಮಾಡಿ ದರು. ನಾಡಿನಲ್ಲಿ ಸುಜ್ಞಾನ ಬೆಳೆಯಿತು; ಜನ ಕಾಯಕವಂತ ರಾದರು; ಅನಾಚಾರ ತತ್ವ ಮರೆಯಾಯಿತು. ಬಹು ದೂರದ ವರೆಗೆ ಸ್ವಾಮಿಗಳ ಹೆಸರು ಹರಡಿತು.

ಎಂಬತ್ತು ವರ್ಷ ಅವರು ಬದುಕಿದ್ದಿರಬೇಕು. ಅವರ ಬದುಕಿನ ಪ್ರತಿ ನಿಮಿಷವೂ ಜನರ ಕಲ್ಯಾಣಕ್ಕೆ ಅರ್ಪಿತ ವಾಗಿತ್ತು; ಬಹು ಧನ್ಯ ಬದುಕು ಅವರದು.

ಅಂಗೀರಸ ಸಂವತ್ಸರ ಕಾಲಿಕ್ಕಿತು. ಆ ವರ್ಷ ಅವರು ಸಂಚಾರ ಹೆಚ್ಚು ಮಾಡಿದರು. ತಮ್ಮ ಎಲ್ಲ ಭಕ್ತರನ್ನು ಕಂಡರು.

ಒಂದು ದಿನ ಗಡ್ಡೆಯಲ್ಲಿ ಭಕ್ತರನ್ನು ಕರೆದರು. ತಾವು ಲಿಂಗದೊಳಗಾಗುವ ವಿಷಯ ತಿಳಿಸಿದರು. ಆಗಲೇ ತಮ ಗಾಗಿ ಸಮಾಧಿಯನ್ನು ಕಟ್ಟಿಸಿದ್ದರು. ಕಾರ್ತೀಕ ಶುದ್ಧ ಚೌತಿಯಂದು ಭಕ್ತರಿಗೆ ಹೇಳಿದರು. "ನಾವಿಂದು ಯೋಗ ಮಂಟಪದಲ್ಲಿ ಶಿವಯೋಗದಲ್ಲಿ ಕುಳಿತುಕೊಳ್ಳುವೆವು. ಐದು ದಿನಗಳವರೆಗೆ ಇದರ ಬಾಗಿಲನ್ನು ತೆರೆಯಬೇಡಿರಿ. ಐದನೆಯ

ದಿನ ಉರವಕೊಂಡೆಯಿಂದ ಕರಿಬಸವಸ್ವಾಮಿ ಬರುವರು. ಅವರು ಇದರ ಬಾಗಿಲು ತೆರೆಯುವರು."

ಚೆನ್ನಬಸವಸ್ವಾಮಿಗಳು ಯೋಗಮಂಟಪದಲ್ಲಿ ಯೋಗದಲ್ಲಿ ಕುಳಿತರು. ಅನೇಕ ಜನ ಭಕ್ತರು ನೆರೆದಿದ್ದರು. ಅವರಲ್ಲಿ ಗಟ್ಟು ಎಂಬ ಊರಿನ ಭಕ್ತರ ರೀತಿಯೇ ಬೇರೆ; ಒಂದಿಷ್ಟು



ಹಟಮಾರಿಗಳು. ಅವರು ಮೂರನೆಯ ದಿನ ಯೋಗಮಂಟ
ಪದ ಬಾಗಿಲ ತೆರೆಯೋಣ ಎಂದರು. ಬಹಳ ಜನ ವಿರೋ
ಧಿಸಿದರು. ಆದರೆ ಗಟ್ಟು ಊರಿನ ಶಿಷ್ಯರು ಯಾರ ಮಾತಿಗೂ
ಕಿವಿಗೊಡಲಿಲ್ಲ. ಯೋಗಮಂಟಪದ ಬಾಗಿಲನ್ನು ತೆರೆದು
ಬಿಟ್ಟರು. ಅಂಗೈಯ ಲಿಂಗದಲ್ಲಿ ದೃಷ್ಟಿ ನೆಟ್ಟು ಚೆನ್ನಬಸವ
ಸ್ವಾಮಿಗಳು ಭೂಮಿಯಿಂದ ಮೂರುನಾಲ್ಕು ಅಡಿ ಎದ್ದು
ಅಂತರದಲ್ಲಿ ನಿಂತಿದ್ದರು. ಬಾಗಿಲು ತೆರೆದ ಕೂಡಲೇ ಸ್ವಾಮಿ
ಗಳ ಕಾಯ ಮೆಲ್ಲಗೆ ಭೂಮಿಗೆ ಕುಸಿದು ಕುಳಿತಿತು. ಅವರು
ಲಿಂಗದೊಳಗಾಗಿದ್ದರು.

ಹಾಹಾಕಾರವೆದ್ದಿತು. ಕೂಡಿದ ಭಕ್ತರು ಗಟ್ಟಿನ ಜನ
ಗಳಿಗೆ ಬೈದರು. ಮುಂದೇನು ಮಾಡಬೇಕೆಂದು ಯೋಚಿಸ
ತೊಡಗಿದರು. ಕೆಲವರು ಕರಿಬಸವ ಸ್ವಾಮಿಗಳು ಬರುವ
ವರೆಗೆ ಕಾಯಬೇಕೆಂದು ಹೇಳಿದರು. ಇನ್ನು ಕೆಲವರು
ಇವತ್ತಿನ ದಿನ ಕೂಡಿಸಿ ಮೂರುದಿನ ಕಾಯುವುದೆಂದ
ರೇನು? ಸಮಾಧಿ ಮಾಡುವುದೇ ಒಳಿತು ಎಂದರು. ಅವ
ರೊಂದು ಇವರೊಂದು ಆಡಿದರು. ಕಡೆಗೆ ಸಮಾಧಿಮಾಡ
ಬೇಕೆಂದು ನಿರ್ಣಯವಾಯಿತು.

ಕಾರ್ತೀಕಶುದ್ಧ ಷಷ್ಠಿಯ ದಿನ ವಿಧ್ಯುಕ್ತವಾಗಿ ಚೆನ್ನ
ಬಸವಸ್ವಾಮಿಗಳ ಸಮಾಧಿ ಕಾರ್ಯ ನಡೆಯಿತು.

ಐದನೆಯ ದಿನ ಉರವಕೊಂಡೆಯಿಂದ ಕರಿಬಸವ
ಸ್ವಾಮಿಗಳು ಬಂದರು. ನಡೆದುದನ್ನು ನೋಡಿ, ಕೊನೆಗಾಲ
ದಲ್ಲಿ ಗುರುದರ್ಶನವಾಗಲಿಲ್ಲವೆಂದು ಬಹುವಾಗಿ ಶೋಕಿಸಿ
ದರು.

## ಸಂಪ್ರದಾಯ ಉಳಿಸಿದರು

ಚೆನ್ನಬಸವಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಅವರ

ಶಿಷ್ಯರು ಅವರನ್ನು ಮರೆಯಲಿಲ್ಲ. ಅವರಲ್ಲಿ ಭಕ್ತಿ ಮೊದಲಿಗಿಂತ ನೂರ್ಮಡಿಯಾಯಿತು. ಅವರ ಉಪದೇಶವನ್ನೂ ಅವರು ಮರೆಯಲಿಲ್ಲ. ಅದನ್ನು ಅನುಷ್ಠಾನಕ್ಕೆ ತಂದರು. ಅವರ ಸಮಾಧಿಯ ಮೇಲೆ ಮಂದಿರ ಕಟ್ಟಿಸಿದರು. ಜನ ಇಳಿದುಕೊಳ್ಳಲು ಮಂಟಪಗಳನ್ನು ಕಟ್ಟಿಸಿದರು. ಗಡ್ಡೆಯಲ್ಲಿ ಬೆಳೆದ ಕಾಡನ್ನು ಕಡಿದು, ಭೂಮಿಯನ್ನು ಹದಗೊಳಿಸಿ, ಬೆಳೆ ಬೆಳೆದರು. ಚೆನ್ನಬಸವ ಸ್ವಾಮಿಗಳ ಸಂಪ್ರದಾಯವನ್ನು ಉಳಿಸಿ ಬೆಳೆಸಲು ಮಠಕ್ಕೆ ಸ್ವಾಮಿಗಳನ್ನು ನೇಮಿಸಿದರು.

ಸ್ವಾಮಿಗಳು ಐಕ್ಯರಾದ ಕಾರ್ತೀಕಶುದ್ಧ ಷಷ್ಠಿಗೆ ಗಡ್ಡೆಯಲ್ಲಿ ಆರಾಧನೆ ಹಮ್ಮಿಕೊಂಡರು, ಜಾತ್ರೆಯನ್ನು ಪ್ರಾರಂಭಿಸಿದರು. ನೂರಾರು ಗಾವುದಗಳಿಂದ ಭಕ್ತಸಮೂಹ ಜಾತ್ರೆಗೆ ಬಂದಿತು.

ದಿನಗಳೆದಂತೆ ವೈರಾಗ್ಯನಿಧಿ ಚೆನ್ನಬಸವಸ್ವಾಮಿಗಳ ನೆನಹು ಬೆಳೆಯಿತು. ಅವರ ಶಿಷ್ಯರು ಅವರ ಚರಿತ್ರೆಯನ್ನು ಹೊಗಳಿ ಹಾಡಿದರು. ಜನಪದ ಕವಿಗಳು ಲಾವಣಿ ಕಟ್ಟಿ ಹಾಡಿದರು. ಶಿಷ್ಟ ಕವಿಗಳು ಭಕ್ತಿಗೀತೆಗಳನ್ನು ರಚಿಸಿದರು.

ಚೆನ್ನಬಸವಸ್ವಾಮಿಗಳ ತರುವಾಯ ಬಂದ ಸ್ವಾಮಿಗಳು ಅವರ ಸಂಪ್ರದಾಯವನ್ನು ಉಳಿಸಿ ಬೆಳೆಸಿದರು. ನಾರದಗಡ್ಡೆ ವೀರಶೈವಧರ್ಮದ ಕೇಂದ್ರವಾಯಿತು.

19ನೆಯ ಶತಮಾನದ ಮೊದಲಿಗೆ ನಾರದಗಡ್ಡೆಯ ಕೀರ್ತಿ ಇನ್ನೂ ಹೆಚ್ಚಾಯಿತು. ಕೊಲ್ಲಾಪುರ, ಗಣೇಕಲ್ಲು, ಮರ್ಚೇಡು, ಗದ್ವಾಲಿ ಮುಂತಾದ ಸಂಸ್ಥಾನಿಕರು ಗಡ್ಡೆ ತಾತನಿಗೆ ನಡೆದುಕೊಳ್ಳತೊಡಗಿದರು. ಅನೇಕ ಊರುಗಳಲ್ಲಿ ಚೆನ್ನಬಸವಸ್ವಾಮಿಗಳ ಹೆಸರಿನಿಂದ ಮಠಗಳು ನಿರ್ಮಾಣವಾದುವು. ನೂರಾರು ಹಳ್ಳಿಗಳಲ್ಲಿ ನಾರದಗಡ್ಡೆಯ ಹೆಸರಿಗೆ

ಭೂಮಿಗಳನ್ನು ದತ್ತಿ ಬಿಟ್ಟರು. ಹೈದರಾಬಾದ್ ಮತ್ತು ಸಿಕಂದರಾಬಾದ್ ಮಧ್ಯೆ ನಾರದಗಡ್ಡೆ ಮಠ ನಿರ್ಮಾಣ ವಾಯಿತು. ಅದಕ್ಕೆ ನಿರಂಜನ ಮಠವೆಂದು ಹೆಸರು. ಅದನ್ನು ಹೈದರಾಬಾದ್ ನವಾಬರು ಕಟ್ಟಿಸಿಕೊಟ್ಟರೆಂದು ಹೇಳು ತ್ತಾರೆ.

ಮರ್ಚೇಡು ರಾಜಾ ನಾಗನಾಥರಾಯನ ಮಗ ರಾಜಾ ವಿರೂಪಾಕ್ಷರಾಯ ಚೆನ್ನಬಸವಸ್ವಾಮಿಗಳ ಗದ್ದುಗೆಯ ಮುಂದೆ ಬಹು ಸುಂದರವಾದ ಮಂಟಪವನ್ನು ಕಟ್ಟಿಸಿದ. ಇದಲ್ಲದೆ ಪೂಜಾಮಂದಿರಗಳನ್ನೂ ಮಹಾದ್ವಾರಗಳನ್ನೂ ಕಟ್ಟಿಸಿದನು. ಭಕ್ತರಿಗೆ ಇಳಿದುಕೊಳ್ಳಲು ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಮಂಟಪಗಳು ನಿರ್ಮಾಣವಾದುವು ಗದ್ವಾಲ ದೊರೆಗಳು ಶ್ವೇತಚ್ಛತ್ರವನ್ನು ಭಕ್ತಿಯಿಂದ ಅರ್ಪಿಸಿದರು.

ಜಾತ್ರೆಯನ್ನು ಹೊಸ ರೀತಿಯಲ್ಲಿ ವೈಭವಪೂರ್ಣವಾಗಿ ಆಚರಿಸಲು ಭಕ್ತರು ನಿರ್ಧರಿಸಿದರು. ಜಾತ್ರೆಯ ಮೇಲ್ವಿಚಾ ರಣೆಯನ್ನು ಗಣೇಕಲ್ಲಿನ ದೊರೆಗಳು ವಹಿಸಿಕೊಂಡರು. ಎಮ್ಮನಾಳು ಚೆನ್ನಬಸಪ್ಪ ತೇರು ಮಾಡಿಸಿದ. ತೇರುಬಜಾರು ಸಿದ್ಧವಾಯಿತು. ಎದುರು ಬಸವನಗುಡಿಯು ನಿರ್ಮಾಣ ವಾಯಿತು. ಜಾತ್ರೆ ಅದ್ದೂರಿಯಿಂದ ನಡೆಯುತೊಡಗಿತು.

ಕಾರ್ತೀಕ ಶುದ್ಧ ಷಷ್ಠಿಗೆ ಇದ್ದ ಜಾತ್ರೆಯನ್ನು ಕೆಲವು ವರ್ಷಗಳ ಬಳಿಕ ಜನರ ಅನುಕೂಲಕ್ಕಾಗಿ ಫಾಲ್ಗುಣ ಶುದ್ಧ ಪಂಚಮಿಗೆ ಇಟ್ಟರು. ಕಾರ್ತೀಕದಲ್ಲಿ ಹೊಳೆಯಲ್ಲಿ ನೀರು ಇರುತ್ತದೆ. ಜಾತ್ರೆಗೆ ಬರುವವರಿಗೆ ಅನಾನುಕೂಲ. ಅಲ್ಲದೆ ಅದು ರೈತರ ವ್ಯವಸಾಯ ಕೆಲಸದ ಕಾಲ. ಅವರಿಗೆ ಜಾತ್ರೆಗೆ ಬರಲು ಬಿಡುವಿರುವುದಿಲ್ಲ. ಫಾಲ್ಗುಣ ಮಾಸದಲ್ಲಿ ಹೊಳೆ ಯಲ್ಲಿ ನೀರಿರುವುದಿಲ್ಲ; ಇದ್ದರೂ ಸುಲಭವಾಗಿ ದಾಟ ಹೋಗ



ನಾರದಗಡ್ಡೆಗೆ ಬರಲು ಕೃಷ್ಣೆಯನ್ನು ಹರಿಗೋಲಲ್ಲಿ ದಾಟುತ್ತಿರುವುದು

ಬಹುದು. ರೈತರಿಗೆ ಸುಗ್ಗಿ ಮುಗಿದಿರುತ್ತದೆ. ಆದಕ್ಕಾಗಿ ಜಾತ್ರೆಯನ್ನು ಫಾಲ್ಗುಣ ಶುದ್ಧ ಪಂಚಮಿಗೆ ನೆರವೇರಿಸ ತೊಡಗಿದರು.

## ನಾರದಗಡ್ಡೆಯ ಮಹಾಜಾತ್ರೆ

ನಾರದಗಡ್ಡೆಯ ಜಾತ್ರೆ ಬಹು ದೊಡ್ಡದು, ಬಹು ರಮ್ಯವಾದುದು, ವಿಶಿಷ್ಟವಾದುದೂ ಹೌದು. ಆಂಧ್ರ-ಕರ್ನಾಟಕದ ಗಡಿಯಲ್ಲಿ ಈ ಗಡ್ಡೆಯಿರುವುದರಿಂದ ಎರಡೂ ನಾಡಿನ ಜನರು ಬರುತ್ತಾರೆ. ಆರವತ್ತು ಸಾವಿರಕ್ಕೂ ಹೆಚ್ಚು ಜನ ಸೇರುತ್ತಾರೆ.

ಫಾಲ್ಗುಣ ಶುದ್ಧ ಪಾಡ್ಯ ಕಂಕಣ ಕಟ್ಟುವ ದಿನ. ಪೂಜಾರಿಗಳು ಮತ್ತು ಸೇವಕರು ಅಂದು ಕಂಕಣ ಕಟ್ಟಿ ಕೊಳ್ಳುವರು. ಇದೊಂದು ಹಬ್ಬ. ಕಂಕಣ ಕಟ್ಟಿಕೊಂಡವರು

ಜಾತ್ರೆ ಮುಗಿಯುವವರೆಗೆ ನದಿಯನ್ನು ದಾಟಬಾರದೆಂದು ನೇಮವಿದೆ.

ಫಾಲ್ಗುಣಶುದ್ಧ ಚೌತಿಯಂದು ಉಚ್ಚಾಯ ಎಳೆಯುತ್ತಾರೆ. ರಥೋತ್ಸವಕ್ಕೆ ಕೂಡುವಷ್ಟೇ ಜನ ಇದಕ್ಕೂ ಕೂಡುತ್ತಾರೆ.

ಫಾಲ್ಗುಣ ಶುದ್ಧ ಪಂಚಮಿಯಂದು ತೇರು ಎಳೆಯುತ್ತಾರೆ. ತೇರಿನಲ್ಲಿ ದೇವರ ಮೂರ್ತಿಯನ್ನಿಡುತ್ತಾರೆ ಮತ್ತು ಸ್ವಾಮಿಗಳು ತೇರಿನ ಮುಂಭಾಗದಲ್ಲಿ ಕೂಡುತ್ತಾರೆ. ಅಲಂಕಾರಗೊಂಡ ರಥ ಎದುರು ಬಸವನ ಗುಡಿಯುವರೆಗೆ ಹೋಗಿ ಮರಳಿಬರುತ್ತದೆ.

ಫಾಲ್ಗುಣ ಶುದ್ಧ ಷಷ್ಠಿಯಂದು ಪಲ್ಲಕ್ಕಿ ಸೇವೆ ನಡೆಯುತ್ತದೆ. ಇದೇ ದಿನ ರಾತ್ರಿ ಏಳು ಗಂಟೆಗೆ ಕಾಮದಹನ ಕಾರ್ಯಕ್ರಮ ಜರುಗುತ್ತದೆ. ದಕ್ಷಿಣ ದಂಡೆಯ ಉಸುಕಿನಲ್ಲಿ ಜನ ಕುಳಿತುಕೊಳ್ಳುತ್ತಾರೆ. ಅವರೆದುರಿಗೆ ಬಾಣಬಿರುಸುಗಳನ್ನು ಸುಡಲಾಗುತ್ತದೆ. ನಾನಾ ಬಗೆಯ ನಾನಾ ಬಣ್ಣಗಳ ಬಾಣಗಳು ಆಕಾಶಕ್ಕೆ ಸಿಡಿಯುವಾಗ, ಹೂವಾಗಿ ಅರಳುವಾಗ, ಮೇಲೆ ಜಿಗಿದು ಸಿಡಿದು ದಳದಳವಾಗಿ ಉದುರುವಾಗ ಕುಳಿತು ನೋಡುವವರಿಗೆ ಯಾವುದೋ ಒಂದು ಬೇರೆ ಲೋಕದಲ್ಲಿ ಇದ್ದೇವೆಂದು ಅನಿಸುತ್ತದೆ. ಸುಮಾರು ಎರಡು ತಾಸುಗಳವರೆಗೆ ಈ ಕಾರ್ಯಕ್ರಮ ನಡೆಯುತ್ತದೆ.

ಫಾಲ್ಗುಣ ಸಪ್ತಮಿಯಂದು ಕಡುಬಿನ ಕಾಳಗ ನಡೆಯುತ್ತದೆ. ಜಾತ್ರೆಯಾದ ಬಳಿಕ ಇದೊಂದು ದೊಡ್ಡ ಹಬ್ಬ. ಹೆಣ್ಣು-ಗಂಡಿನವರಾಗಿ ಹೂರಣಗಡುಬುಗಳನ್ನು ಒಗೆದಾಡುವುದು ನೋಡಲು ಬಹು ಮೋಜಿನದಾಗಿರುತ್ತದೆ. ಅಂದು



ಜಾತ್ರಾಕಾಲದಲ್ಲಿ ಪಲ್ಲಕ್ಕಿ ಸೇವಾದೃಶ್ಯ

ರಾತ್ರಿ ದೇವರನ್ನು ತೊಟ್ಟಿಲಲ್ಲಿ ಹಾಕುವರು. ಮಕ್ಕಳಾಗದವರು ತೊಟ್ಟಿಲನ್ನು ತೂಗಿದರೆ ಮಕ್ಕಳಾಗುವುದೆಂದು ನಂಬುಗೆಯಿಂದೆ.

ರಥೋತ್ಸವದ ದಿನ ಉತ್ತರ ದಕ್ಷಿಣ ದಂಡೆಗಳ ಮೇಲೆ ನಿಂತು ನೋಡಬೇಕು. ಗಡ್ಡೆಯ ತುಂಬ ಜನ. ಎಳ್ಳು ಚೆಲ್ಲಲೂ ಸ್ಥಳವಿಲ್ಲದಷ್ಟು ಜನ. ಅಲಂಕಾರಗೊಂಡ ಅಂಗಡಿಗಳು; ಎತ್ತರವಾದ ತೇರು. ಭೂಮಿಯೇ ಕಾಣುವುದಿಲ್ಲ. ಎಲ್ಲವೂ ಅಂತರದಲ್ಲಿ ತೇಲುತ್ತಿರುವಂತೆ ಕಾಣುತ್ತದೆ.

ಈ ಜಾತ್ರೆ ಅನೇಕ ದೃಷ್ಟಿಗಳಿಂದ ಮಹತ್ವವುಳ್ಳದ್ದಾಗಿದೆ. ಈ ಭಾಗದ ಜನಗಳಿಗೆ ಇದುವೇ ದೊಡ್ಡ ಜಾತ್ರೆ. ಜನರು ಇಡಿಯ ವರ್ಷಕ್ಕೆ ಬೇಕಾಗುವ ಜೀವನಾವಶ್ಯಕ ವಸ್ತುಗಳನ್ನು ಈ ಜಾತ್ರೆಯಲ್ಲಿ ಕೊಳ್ಳುತ್ತಾರೆ. ಕಂಬಳಿ,

ಕಂಚಿನ ಪಾತ್ರೆಗಳು, ಎತ್ತಿನ ಬಂಡಿ, ಎತ್ತುಗಳು, ಮರದ ಸಾಮಾನು ಮುಂತಾದವುಗಳಿಗೆ ಹೆಸರಾದ ಜಾತ್ರೆಯಿದು.

ನಾನಾವಿಧವಾದ ಕಂಬಳಿಗಳನ್ನು ಇಲ್ಲಿ ನೋಡಬೇಕು. ಆಂಧ್ರದ ಹಳ್ಳಿಗರು ಇವುಗಳನ್ನು ನೆಯ್ದು ತಂದಿರುತ್ತಾರೆ. ಸಾವಿರ ಸಂಖ್ಯೆಯಲ್ಲಿ ಎತ್ತುಗಳು ಮಾರಾಟಕ್ಕೆ ಬಂದಿರುತ್ತವೆ; ದೂರದೂರದಿಂದ ಜನ ಎತ್ತುಗಳನ್ನು ಕೊಳ್ಳಲು ಬರುತ್ತಾರೆ. ಗದ್ವಾಲ ಮುಂತಾದ ಸ್ಥಳಗಳಿಂದ ಸುಂದರವಾದ ಗಟ್ಟಿಮುಟ್ಟಾದ ಎತ್ತಿನ ಬಂಡಿಗಳನ್ನು ಮಾರಾಟಕ್ಕೆ ತಂದಿರುತ್ತಾರೆ.

ನಾನಾ ಭಾಷೆಯ ಜನ ಸೇರುವುದರಿಂದ ಇದೊಂದು ಭಾವೈಕ್ಯಕ್ಕೆ ಮಹತ್ವದ ಸ್ಥಳವಾಗಿದೆ. ಎಲ್ಲ ಮತಪಂಥದ



ಕರ್ತೃಶ್ರೀಗಳವರ ಗದ್ದುಗೆಯ ಮಂಟಪ (ಮಂದಿರ-ಗುಡಿ)



ಕರ್ತೃಶ್ರೀಗಳವರ ಗದ್ದುಗೆ

ವರು ಗದ್ದುಗೆಗೆ ನಡೆದುಕೊಳ್ಳುತ್ತಾರೆ; ವಾರದ ದಾಸೋಹ ದಲ್ಲಿ ಭಕ್ತಿಯಿಂದ ಪ್ರಸಾದ ಸ್ವೀಕರಿಸುತ್ತಾರೆ. ಎರಡು ಮೂರುದಿನ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವು ದರಿಂದ ಎಲ್ಲ ಭಾಷೆಯ ಜನರಿಗೆ ತಮ್ಮ ತಮ್ಮ ಹೃದಯ ಪರಿಚಯಕ್ಕೆ ಉತ್ತಮ ಅವಕಾಶವಿರುತ್ತದೆ. ರಾಷ್ಟ್ರ ಕೈಗೊಂಡ ಭಾವೈಕ್ಯದ ಮಹಾಕಾರ್ಯ ನಾರದಗಡ್ಡೆಯಲ್ಲಿ ಸದ್ದಿಲ್ಲದೆ ನಡೆಯುತ್ತದೆ.

## ಈಗಿನ ಶ್ರೀಗಳು–ಚೆನ್ನಬಸವ ಸ್ವಾಮಿಗಳು

ನಾಲ್ಕುನೂರು ವರ್ಷಗಳಿಂದಲೂ ನಾರದಗಡ್ಡೆಕ್ಷೇತ್ರ ಭಕ್ತರನ್ನು ಆಕರ್ಷಿಸುತ್ತಲಿದೆ. ಶರಣರ ತತ್ವಗಳನ್ನು ಜನ ಜೀವನಕ್ಕೆ ಇಳಿಸುತ್ತಲಿದೆ. ಈಗ ಕೆಲವು ವರ್ಷಗಳಿಂದ ಈ ಸುಕ್ಷೇತ್ರ ಕೆಲ ವಿನೂತನ ವೈಶಿಷ್ಟ್ಯಗಳನ್ನು ಸಾಧಿಸಿದೆ. ಇದಕ್ಕೆ ಕಾರಣರಾದವರು ಈಗಿನ ಶ್ರೀಚೆನ್ನಬಸವಸ್ವಾಮಿಗಳು.



ಶ್ರೀ ಚೆನ್ನಬಸವ ಸ್ವಾಮಿಗಳು

ಶ್ರೀಚೆನ್ನಬಸವ ಸ್ವಾಮಿಗಳ ಪೂರ್ವಾಶ್ರಮದ ಹೆಸರು ಬಸವರಾಜ ಎಂದು. ಅವರ ಹುಟ್ಟಿದೂರು ಬಳ್ಳಾರಿ ಜಿಲ್ಲೆಯ ಕೊರ್ಲಗುಂದಿ. ಸಂಗಯ್ಯ–ಸೂಗಮ್ಮ ಅವರ ತಂದೆತಾಯಿಗಳು. ಬಸವರಾಜರಿಗೆ ಚಿಕ್ಕಂದಿನಿಂದಲೂ ವೈರಾಗ್ಯದತ್ತ ಒಲವು. ಯೌವನ ಬರುವುದರೊಳಗಾಗಿ ಶರಣರ ಚರಿತ್ರೆಗಳನ್ನು ಅಭ್ಯಸಿಸಿದರು. ವಚನಗಳನ್ನು ಜೀರ್ಣಿಸಿಕೊಂಡರು.

ಲಿಂ. ಸಾವಳಗಿ ಸಿದ್ಧರಾಮಸ್ವಾಮಿಗಳ ಕೃಪಾಛತ್ರದಲ್ಲಿ ಬಸವರಾಜರು ಅನುಷ್ಠಾನಗೈದರು. ಮುಂದೆ ಧಾರವಾಡ ಮುರುಘಾಮಠದ ಶ್ರೀ ಮ. ನಿ. ಪ್ರ. ಮಹಾಂತ ಶಿವಯೋಗಿಗಳವರಿಂದ 'ಪಡೆದಪ್ಪ'ರಾಗಿ, ದಿನಾಂಕ 26-2-1966ರಂದು ನಾರದ ಸುಕ್ಷೇತ್ರದ ಅಧಿಪತಿಗಳಾದರು. ಬ ಸ ವ ರಾ ಜ ಎಂಬುದು ಹೋಗಿ ಅವರ ಹೆಸರು ಚೆನ್ನಬಸವಸ್ವಾಮಿಗಳು ಎಂದಾಯಿತು.

ಇವರು ಪಟ್ಟಕ್ಕೆ ಬಂದ ಬಳಿಕ ಸುಕ್ಷೇತ್ರದ ವಾತಾವರಣವೇ ಬದಲಾಯಿತು. ಕೃಷ್ಣೆಯ ಚೆಲುವಿಗೆ ದೈವೀಕಲೆ ಮೂಡಿಬಂದಿತು. ಈ ಮಣ್ಣಿನಲ್ಲಿ ಹುದುಗಿ ಸಮಯವನ್ನು ಕಾಯುತ್ತ ಕುಳಿತಿದ್ದ ಸತ್ವ ಜಿಗಿದು ಮೇಲೆದ್ದಿತು.

ಶ್ರೀಗಳವರು ನಾರದಗಡ್ಡೆಯ ಪ್ರಾಚೀನ ಸತ್ಸಂಪ್ರದಾಯಗಳನ್ನು ಮುಂದುವರಿಸಿದುದಲ್ಲದೆ ಹೊಸ ಸಂಪ್ರದಾಯಗಳನ್ನು ಪ್ರಾರಂಭಿಸಿದರು.

ನಾರದಗಡ್ಡೆಯಲ್ಲಿ ವರ್ಷಕ್ಕೆರಡು ಬಾರಿ ಕಾರ್ತೀಕದಲ್ಲೊಮ್ಮೆ, ಫಾಲ್ಗುಣಮಾಸದಲ್ಲೊಮ್ಮೆ ದೊಡ್ಡ ಉತ್ಸವಗಳು ನಡೆಯುತ್ತವೆ. ಆಯಾಕಾಲಕ್ಕೆ ವಿದ್ವಜ್ಜನರ ಗೋಷ್ಠಿ, ಶಿವಾನುಭವಗೋಷ್ಠಿ, ಸಂಗೀತಸಭೆ, ಕೀರ್ತನೆ, ಪುರಾಣ, ಭಜನೆ ಜರುಗುತ್ತವೆ. ಈ ಕಾರ್ಯಕ್ರಮಗಳು ಹೊಸದಾಗಿ

ಶ್ರೀಗಳವರು ಬಂದನಂತರ ಪ್ರಾರಂಭವಾದುವು. ನಾರದಗಡ್ಡೆ ಸರ್ವಧರ್ಮದವರು, ಸರ್ವಮತದವರು ಪರಸ್ಪರ ಪ್ರೀತಿಯಿಂದ ಕೂಡುವ ಪುಣ್ಯ ಸ್ಥಳವಾಗಿದೆ.

ಶ್ರೀಗಳದು ಸೌಜನ್ಯ ಅನುಕರಣೀಯ. ಒಳ್ಳೆಯದೆಲ್ಲಿದೆಯೋ, ಕಾವ್ಯ, ಸಾಹಿತ್ಯ, ಸಂಗೀತ ಎಲ್ಲಿದೆಯೋ ಅಲ್ಲಿಗೆ ಅವರೇ ಹೋಗುತ್ತಾರೆ. ಸಕಲರನ್ನೂ ಆದರಿಸುವ ಗುಣ ಅವರದು. ಅವರ ಮಾತು ಮೃದು, ನೇರ.

ಶ್ರೀಗಳವರಿಗೆ ಅದ್ಭುತ ಕತೃತ್ವಶಕ್ತಿ. ರಾಯಚೂರಿನಿಂದ ನಾರದಗಡ್ಡೆಗೆ ರಸ್ತೆ ಇರಲಿಲ್ಲ. ಇವರು ಬಂದಬಳಿಕ ರಸ್ತೆ ನಿರ್ಮಾಣವಾಯಿತು; ವಿದ್ಯುಚ್ಛಕ್ತಿ ನಾರದಗಡ್ಡೆಗೆ ಬಂತು. ಇದರಿಂದ ಅನೇಕ ಹಳ್ಳಿಗಳಿಗೆ ಲಾಭವಾಯಿತು; ಶ್ರೀಗಳವರ ಕೃಪೆಯಿಂದ ಅವುಗಳಿಗೂ ವಿದ್ಯುಚ್ಛಕ್ತಿ ದೊರಕಿತು.

1968ರ ಜಾತ್ರೆಯ ಕಾಲಕ್ಕೆ ಶ್ರೀಬಸವೇಶ್ವರ ಅಷ್ಟಮ ಶತಮಾನೋತ್ಸವವನ್ನು ಬಹು ವಿಜೃಂಭಣೆಯಿಂದ ಆಚರಿಸಲಾಯಿತು. ಮೈಸೂರು ರಾಜ್ಯದ ಕಾನೂನು ಮಂತ್ರಿಗಳಾಗಿದ್ದ ಮಾನ್ಯಶ್ರೀ ಎಸ್. ಆರ್. ಕಂಠಿಯವರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ನಾರದಗಡ್ಡೆ ಕ್ಷೇತ್ರ ಪ್ರವಾಸೀಕೇಂದ್ರವಾಗಬೇಕು. ಅಲ್ಲಿ ಗ್ರಂಥಭಂಡಾರ, ಸಂಶೋಧನಾಲಯ ಸ್ಥಾಪಿತವಾಗಬೇಕು. ಸಂಶೋಧಕರಿಗೆ ಊಟದ ವ್ಯವಸ್ಥೆಯಾಗಬೇಕು–ಎಂಬುದು ಶ್ರೀಗಳವರ ಇಚ್ಛೆಯಾಗಿದೆ. ಸನಿಹ ಭವಿಷ್ಯದಲ್ಲಿ ಇದೆಲ್ಲ ಕೈಗೂಡಲಿದೆ.

ಶ್ರೀಗಳವರು ಹುಟ್ಟುಕವಿಗಳು, ಕಲೋಪಾಸಕರು. 'ಶ್ರೀಗುರುಸನ್ನಿಧಿ' ಎಂಬುದು ಅವರ ಮೊದಲ ಕೃತಿ.

ಇದೊಂದು ಕಥಾರೂಪಕ. ಸ್ವಾಮಿಗಳು ಪ್ರಗತಿಶೀಲರು. ಮಾರಕವಾಗುವ ಸಂಪ್ರದಾಯವನ್ನು ಬದಿಗೊತ್ತಿ ಸಮಾಜವನ್ನು ಉದ್ಧರಿಸುವ ಹೊಸ ಸಂಪ್ರದಾಯ ಬೇಕೆನ್ನುವವರು. ಈ ವಿಷಯವನ್ನು ಅವರು ಈ ಕಥಾರೂಪದಲ್ಲಿ ಚಿತ್ರಿಸಿದ್ದಾರೆ. 'ಸ್ವಯಂಪ್ರಭೆ' ಅವರ ಕವನಸಂಕಲನ. 'ಸವಿಜೇನು' ಮತ್ತು 'ಅಂತರಂಗ' ಇವೆರಡು ಅವರ ವಚನಸಂಗ್ರಹಗಳು.

"ಜನರಿಂದ ನನಗೆಷ್ಟು ಅಪಕಾರವಾದರೂ ಆಗಲಿ
ನನ್ನಿಂದ ಜಗಕೆ ಅಪಕಾರವಾಗದಿರಲಿ"
"...ಶ್ರೀ ನಾರದಕ್ಷೇತ್ರಾಧಿಪಾ ನಿನ್ನ ದರ್ಶನ
ಜನರ ರೂಪದಲಿ ನನಗಾಗುತ್ತಿರಲಿ"
"...ಇಂದಿನ ಜನ್ಮ ಸಮಾಜ, ಜನತೆಗಾಗಿ
ಸವೆಸವೆದು ಹೋಗಲಿ"

ಈ ಮುಂತಾದ ಮಾತುಗಳಲ್ಲಿ ಸಮಾಜದ ಬಗೆಗಿನ ಅವರ ಕಳಕಳಿ ವ್ಯಕ್ತವಾಗುತ್ತದೆ.

ಈ ವಚನದಲ್ಲಿ ರಾಮರಾಜ್ಯದ ಸುಂದರ ಕಲ್ಪನೆಯಿದೆ:

"ರಾಮನಿಲ್ಲದೆ ರಾಮರಾಜ್ಯ ಕಟ್ಟಬಹುದೆ ?
ರಾಮ ಎಂದರೆ ಸರ್ವರ ಲೇಸು,
ರಾಮ ಎಂದರೆ ಸರ್ವರ ಶುಭ,
ರಾಮ ಎಂದರೆ ಶ್ರೀಸಾಮಾನ್ಯ,
ಇದನ್ನು ಅರಿತು ಆಚರಿಸಿದರೆ
ರಾಮರಾಜ್ಯ ಖಂಡಿತ ಬಪ್ಪುದು..."

ಚೆನ್ನಬಸವ ಸ್ವಾಮಿಗಳು ಪುರಾತನದ ಜೊತೆಗೆ ಹೊಸದನ್ನು ಜೋಡಿಸಿ ನಾರದಗಡ್ಡೆಗೆ ಒಂದು ಶೋಭೆ ತಂದಿದ್ದಾರೆ. ಸಾಂಸ್ಕೃತಿಕವಾಗಿ ಈ ನಾಡನ್ನು ಬಲಗೊಳಿಸಲು ಅವರಲ್ಲಿ ಹಲವು ಯೋಜನೆಗಳಿವೆ. ಆ ನಿಟ್ಟಿನಲ್ಲಿ ಅವರು ಕಾರ್ಯಪ್ರವೃತ್ತರಾಗಿದ್ದಾರೆ.

—)(—

## ಕನ್ನಡನಾಡು ಮತ್ತು ಕನ್ನಡಿಗರ ಪರಂಪರೆ—
## ಈ ಮಾಲೆಯ ಇತ್ತೀಚಿನ ಪ್ರಕಟಣೆಗಳು

**ಪ್ರತಿ ಪುಸ್ತಕದ ಬೆಲೆ ರೂ. 1·50**

| | |
|---|---|
| ನಟವರ್ಯ ಹಂದಿಗನೂರು ಸಿದ್ಧರಾಮಪ್ಪ | ವಸಂತ ಕವಲಿ |
| ಹಿರಿಯಡ್ಕ ರಾಮರಾಯ ಮಲ್ಯ | ಅ. ರಾ. ಮಿತ್ರ |
| ಶಾಸನ ಪಿತಾಮಹ ಬಿ. ಎಲ್. ರೈಸ್ | ಶ್ರೀನಿವಾಸ ಹಾವನೂರ |
| ಕನ್ನಡ ಸಾಹಿತ್ಯ ನಡೆದುಬಂದ ದಾರಿ | ಪ್ರೊ. ಜಿ. ವೆಂಕಟಸುಬ್ಬಯ್ಯ |
| ಕರ್ನಾಟಕದಲ್ಲಿ ಕೃಷಿ | ಅ. ಶೇಷಾದ್ರಿ ಅಯ್ಯರ್ |
| ವಿಜಯನಗರದ ವಾಸ್ತುಶಿಲ್ಪ | ಡಾ. ಬಾ. ರಾ. ಗೋಪಾಲ್ |
| ಕನ್ನಡ ಮಾತು | ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ |
| ಕನ್ನಡ ಭಾಷೆ: ಪ್ರಾದೇಶಿಕ ವೈವಿಧ್ಯ | ಡಾ. ಬಿ. ರಾಮಚಂದ್ರರಾವ್ |
| ನಾಟಕ ಸಾರ್ವಭೌಮ<br>ಶಿರಹಟ್ಟಿ ವೆಂಕೋಬರಾಯರು | ಸದಾನಂದ ಕನವಳ್ಳಿ |
| ಬೆಂಗಳೂರಿನ ಕರಗ | ಪ್ರೊ. ಎಸ್. ಕೆ. ರಾಮಚಂದ್ರರಾವ್ |
| ಕರ್ನಾಟಕ ಸಂಗೀತ ವಾದ್ಯಗಳು | ಎಂ. ಚೆಲುವರಾಯಸ್ವಾಮಿ |
| ಕರ್ನಾಟಕದಲ್ಲಿ ಕೈಗಾರಿಕಾ ಕ್ರಾಂತಿ | ಪ್ರೊ. ಈರಣ್ಣ. ಹಟ್ಟಿ |
| ಮಂಡ್ಯ ಜಿಲ್ಲೆ : ದರ್ಶನ | ಮಸ್ನೇಕೋಟೆ ಕೇಶವರಾವ್ |
| ಶಿವಮೊಗ್ಗ ಜಿಲ್ಲೆ: ದರ್ಶನ | ಡಾ. ಅ. ಸುಂದರ |
| ಚಿಕ್ಕಮಗಳೂರು ಜಿಲ್ಲೆ: ದರ್ಶನ | ಕಾಶಿ ವಿಶ್ವನಾಥ ಶೆಟ್ಟಿ |
| ಸಿದ್ದಪ್ಪ ಹೊಸಮನಿ | ಗೋವಿಂದಮೂರ್ತಿ ದೇಸಾಯಿ |
| ಶ್ರೀ ಚಾಮುಂಡೇಶ್ವರಿ | ಸೂ. ಸುಬ್ರಹ್ಮಣ್ಯಂ |
| ವಿಜಯನಗರದ ಕಾಲದಲ್ಲಿ ಕಲೆ ಸಾಹಿತ್ಯ | ಡಾ. ಕೆ. ಶ್ರೀಕಂಠಯ್ಯ |
| ಹೊರನಾಡಿನಲ್ಲಿ ಆಳಿದ<br>ಕನ್ನಡ ರಾಜವಂಶಗಳು | ಡಾ. ಬಾ. ರಾ. ಗೋಪಾಲ್ |
| ಹುತಾತ್ಮ ಮಲ್ಲಪ್ಪ ಧನಶೆಟ್ಟಿ | ಲಲ್ಲೇಶ್ವರಿಮೂಗಿ |
| ಪ್ರಧಾನ ಶಿರೋಮಣಿ<br>ನ್ಯಾಪತಿ ಮಾಧವರಾಯರು | ಈಶ್ವರ ದೈತೋಟ |

| | |
|---|---|
| ಅನ್ಯಭಾಷೆಗಳ ಮೇಲೆ ಕನ್ನಡದ ಪ್ರಭಾವ | ಎಸ್. ಲಕ್ಷ್ಮೀನಾರಾಯಣ ಅರೋರಾ |
| ಕೊಡಗು ಜಿಲ್ಲೆ: ದರ್ಶನ | ಜಿ. ಎಸ್. ಕೇಶವಾಚಾರ್ಯ |
| ಸನ್ನತಿ | ಎ. ಎಂ. ಅಣ್ಣಿಗೇರಿ |
| ಶಾಂತವೇರಿ ಗೋಪಾಲಗೌಡರು | ದೇವಂಗಿ ಟಿ. ಚಂದ್ರಶೇಖರ |
| ಅಂಬಿಗರ ಚೌಡಯ್ಯ | ಎಸ್. ಎಸ್. ಭೂಸರೆಡ್ಡಿ |
| ಮೈಸೂರು ದಸರ | ವೆಂ. ಮು. ಜೋಶಿ |
| ಮಹರ್ಷಿ ದೈವರಾತರು | ಪ್ರೊ. ಎಸ್. ಕೆ. ರಾಮಚಂದ್ರರಾವ್ |
| ಗಳಗನಾಥರು | ಟಿ. ಎಚ್. ಹೊನ್ನಗಂಗಪ್ಪ |
| ಕರ್ನಾಟಕದಲ್ಲಿ ಸಮಾಜಕಲ್ಯಾಣ | ಎಂ. ಎಸ್. ಶ್ರೀಹರ್ಷ |
| ಕರಾವಳಿಯ ಜಾನಪದ ಕಥೆಗಳು | ಡಾ. ಎಲ್. ಆರ್. ಹೆಗಡೆ |
| ದಕ್ಷಿಣ ಕರ್ನಾಟಕದ ಗಂಡಸರ ಜನಪದ ಗೀತ ಮೇಳಗಳು | ಡಾ. ಜೀ. ಶಂ. ಪರಮಶಿವಯ್ಯ |
| ರಾಮರಾವ್ ಹುಕ್ಕೇರಿಕರ ಮಾಸ್ತರ್ | ಎನ್ಕೆ |
| ಹರ್ಡೇಕರ ಮಂಜಪ್ಪನವರು | ಡಾ. ಶಿವಾನಂದ ಗುಬ್ಬಣ್ಣವರ |
| ಸೊಂಡೂರಿನ ಘೋರ್ಪಡೆ ಮನೆತನ | ಟಿ. ಬಿ. ಕೇಶವರಾವ್ |
| ಕರ್ನಾಟಕದಲ್ಲಿ ಪುರಾತತ್ವ ಶೋಧನೆ | ಡಾ. ಎ. ವಿ. ನರಸಿಂಹ ಮೂರ್ತಿ |
| ಆಡಳಿತ ಭಾಷೆ ಕನ್ನಡ | ಎನ್. ಎಸ್. ರಾಮಪ್ರಸಾದ್ |
| ಹೊಯ್ಸಳ ವಾಸ್ತುಶಿಲ್ಪ ಪರಿಚಯ | ಎಚ್. ಆರ್. ರಘುನಾಥ ಭಟ್ |
| ಹೊರನಾಡಿನಲ್ಲಿ ಕರ್ನಾಟಕ ವಾಸ್ತುಶಿಲ್ಪ | ಡಾ. ಬಾ .ರಾ. ಗೋಪಾಲ್ |
| ಬೀದರ ಜಿಲ್ಲೆ : ದರ್ಶನ | ಡಾ. ಎಲ್. ಆರ್. ಕುಲಕರ್ಣಿ |



ಅಂತರ ರಾಷ್ಟ್ರೀಯ
ಮಕ್ಕಳ ವರ್ಷ 1979

## ಸಂತಸದ ಮಗು
## ರಾಷ್ಟ್ರದ ಹೆಮ್ಮೆ



ಮಕ್ಕಳ ವರ್ಷ ಸಾರಿದರೆಂದು
ಚಿಟಿಕೆ ಚಮತ್ಕಾರದ ಧೋರಣೆಯಲ್ಲ
ಕಳೆದ ದಶಕದಿಂದಲೂ ಸಾಗಿ ಬಂದ
ನಮ್ಮ ನಿರಂತರ ಸಾಧನೆಯ ಪ್ರತೀಕ
ಮಕ್ಕಳಿಗಾಗಿಯೇ ನಮ್ಮ ಪ್ರಕಾಶನದ ಮುಡಿಪು




Rs 4/00



ಮಕ್ಕಳ ಪುಸ್ತಕಗಳ ಪಟ್ಟಿಗೆ ಬರೆಯಿರಿ




ಐಬಿಎಚ್ ಪ್ರಕಾಶನ
ಗಾಂಧಿನಗರ ಬೆಂಗಳೂರು 560 009